# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಪಾಂಡವರು ವನವಾಸಮಾಡಿಕೊಂಡಿದ್ದಾಗ ದುರ್ಯೋಧನನನ್ನು ಗಂಧರ್ವರ ಬಂಧನದಿಂದ ಬಿಡಿಸುವ ಸಂದರ್ಭದಲ್ಲಿ ಭೀಮನೂ ಅರ್ಜುನನೂ "ನಮ್ಮಿಂದಾಗಬೇಕಾದ ಕಾರ್ಯವನ್ನು ಗಂದರ್ವರೇ ಮಾಡಿ ತೀರಿಸುತ್ತಾರೆ" ಎನ್ನಲು, ಧರ್ಮರಾಜನು ಒಪ್ಪಿಕೊಳ್ಳದೆ, "ನಮ್ಮೊಳಗಿನ ಶತ್ರುತ್ವದ ವಿಷಯದಲ್ಲಿ ಕೌರವರು ನೂರು ಜನರು, ನಾವು ಐವರು ಎಂದಿರಬೇಕು. ಹೊರಗಿನ ಶತ್ರುಬಂದಾಗ, ನಾವು ನೂರೈದು ಮಂದಿಗಳಾಗಿರಬೇಕು." ("ವಯಂ ಪಂಚಾಧಿಕಂ ಶತಂ") ಎಂದು ಹೇಳಿದ್ದಾನೆ. ಇದು ಎಲ್ಲ ಕಾಲಕ್ಕೂ ಎಲ್ಲಾ ಮನೆಗಳಿಗೂ, ಸಮಾಜಗಳಿಗೂ, ದೇಶಗಳಿಗೂ ಅನ್ವಯಿಸು ವಂತಹುದು. ಈ ಸಂಚಿಕೆಯಲ್ಲಿರುವ "ಬಲಿಷ್ಠ ಶತ್ರು" ಎಂಬ ಕಥೆ ಒಂದು ಮನೆಯಲ್ಲಿ ನಡೆದುದಾದರೂ ಆ ಮಹಾ ನೀತಿ ಯನ್ನು ಜ್ಞಾಪಕಪಡಿಸುವಂತಿದೆ.

ಸಂಪುಟ : ೬೦ ಜನವರಿ '೭೮ ಸಂಚಿಕೆ : ೧

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦









ಭೂಯೋ ವಿನಯಮಾಸ್ಥಾಯ
ಭವ ನಿತ್ಯಂ ಜಿತೇಂದ್ರಿಯಃ
ಕಾಮಕ್ರೋಧ ಸಮುತ್ಥಾನಿ
ತ್ಯಜೇಥಾ ವ್ಯಸನಾನಿ ಚ ೧.

ನೀನು ವಿನಯದಿಂದ, ಜಿತೇಂದ್ರಿಯನಾಗಿದ್ದು, ಕಾಮಕ್ರೋಧಾದಿಗಳಿಂದ ಹುಟ್ಟುವ ವ್ಯಸನಗಳನ್ನು ತ್ಯಜಿಸು.

ಪರೋಕ್ಷಯಾ ವರ್ತಮಾನೋ
ವೃತ್ತ್ಯಾ ಪ್ರತ್ಯಕ್ಷಯಾ ತಥಾ
ಅಮಾತ್ಯ ಪ್ರಭೃತೀಸ್ಸರ್ವಾಃ
ಪ್ರಕೃತಿಶ್ಚಾನು ರಂಜಯ ೨.

ನೀನು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಮಂತ್ರಿಗಳೇ ಮೊದಲಾದವರಿಗೆ ಆಜ್ಞೆಮಾಡುತ್ತ ಪ್ರಜೆಗಳನ್ನೆಲ್ಲಾ ಸಂತೋಷಪಡಿಸು.

ತುಷ್ಟಾನುರಕ್ತ ಪ್ರಕೃತಿ
ರ್ಯಃ ಪಾಲಯತಿ ಮೇದಿನಯ್
ತಸ್ಯ ನಂದಂತಿ ಮಿತ್ರಾಣಿ
ಲಬ್ಧಾಮೃತಮಿವಾಮರಾ ೩.

ಪ್ರಜೆಗಳನ್ನು ತೃಪ್ತಿಪಡಿಸಿ ಭೂಮಿಯನ್ನು ಪಾಲಿಸುವ ರಾಜನನ್ನು ನೋಡಿ, ಅಮೃತ ದೊರಕಿದ ದೇವತೆಗಳಂತೆ ಮಿತ್ರರು ಸಂತೋಷಿಸುವರು.

---

ಯುವರಾಜನಿಗೆ ಹಿತಬೋಧೆ

---




# ಕಾಕೋಲೂಕೀಯ

೫೪

ಹಾವಿನ ಕಥೆಯನ್ನು ಹೇಳಿ ಮುಗಿಸಿದ ಮೇಲೆ ರಕ್ತಾಕ್ಷಿ, "ನಾವು ಈ ಕಾಗೆಯನ್ನು ಕೊಂದು ಆಲದ ಮರದ ರಾಜ್ಯವನ್ನು ವಶಪಡಿಸಿಕೊಂಡು ನಿರ್ಭಯ ವಾಗಿ ಜೀವಿಸೋಣ" ಎಂದಿತು.

ಅರಿಮರ್ದನವು ಕ್ರೂರಾಕ್ಷಿಯ ಅಭಿಪ್ರಾಯ ವೇನೆಂದು ಕೇಳಿತು. ಅದಕ್ಕೆ ಕ್ರೂರಾಕ್ಷಿ, "ನಾನು ರಕ್ತಾಕ್ಷಿಯ ಸಲಹೆಯೊಂದಿಗೆ ಏಕೀಭವಿಸಲಾರೆ. ನಮ್ಮನ್ನು ಶರಣು ಬಂದ ಈ ದಿಕ್ಕಿಲ್ಲದ ಕಾಗೆ ಯನ್ನು ಕೊಲ್ಲುವುದು ಧರ್ಮವಲ್ಲ. ಮಹಾಪಾಪ ಕೂಡಾ. ಶಿಬಿಚಕ್ರವರ್ತಿಯ ಕಥೆಯನ್ನು ಕೇಳಿಲ್ಲವೇ ? ಕಪೋತ ದಂಪತಿಗಳ ಕಥೆ ಕೇಳಿಲವೇ ?" ಎಂದಿತು.

"ಅದೇನು ಕಥೆಗಳು ?" ಎಂದು ಅರಿಮರ್ದನವು ಕೇಳಲು, ಕ್ರೂರಾಕ್ಷಿ ಆ ಕಥೆಗಳನ್ನು ಹೇಳಿತು. ಮೊದಲು ಶಿಬಿಚಕ್ರವರ್ತಿಯ ಕಥೆ ಹೇಗೆಂದರೆ,

ಒಂದು ಕಾಲದಲ್ಲಿ ಶಿಬಿಚಕ್ರವರ್ತಿ ಎಂಬವನು ಭಾರತ ದೇಶದ ಎಲ್ಲಾ ರಾಜರನ್ನೂ ತನ್ನ ಸಾಮಂತ ರನ್ನಾಗಿ ಮಾಡಿಕೊಂಡಿದ್ದನು, ಅಷ್ಟಾದರೂ ಶಿಬಿ ದಯಾಸ್ವರೂಪನಾಗಿದ್ದನು. ಮಹಾ ದಾತನಾದ ಅವನ ದಾತೃತ್ವದ ಖ್ಯಾತಿ ಸ್ವರ್ಗದ ವರೆಗೂ ವ್ಯಾಪಿಸಿತು. ಆಗ ಇಂದ್ರನು ಏನೆಂದುಕೊಂಡನೆಂದರೆ, "ಶಿಬಿಯಂತಹ ದಾತ ಇನ್ನೊಬ್ಬನಿಲ್ಲ. ಹೀಗೆ ಅಪಾರ ದಾನಧರ್ಮ ಮಾಡುವುದರಲ್ಲಿ ಅವನ ಉದ್ದೇಶ ವೇನಿರಬಹುದು ? ಕೀರ್ತಿ ಕಾಂಕ್ಷೆಯಿಂದ ಹೀಗೆ ಮಾಡುತ್ತಾನೋ, ಅಥವಾ ಅವನಿಗೆ ಅಸಹಾಯಕರ ಮೇಲೆ ನಿಜವಾದ ದಯೆ ಇದೆಯೆ ? ಪರೀಕ್ಷಿಸಿ ನೋಡಲೇಬೇಕು."

ಈ ಅನುಮಾನಗಳನ್ನು ತೀರಿಸಿಕೊಳ್ಳಲಿಕ್ಕಾಗಿ ಇಂದ್ರನು ಯಮನನ್ನು ಕರೆದು ಅವನೊಂದಿಗೆ ಕೂಡಿ ಒಂದು ಪಥಕವನ್ನು ಆಲೋಚನೆ ಮಾಡಿದನು.

ಒಂದು ಬೆಳಿಗ್ಗೆ ಶಿಬಿ ಕಾಲಕೃತ್ಯಗಳನ್ನು ತೀರಿಸಿ ಕೊಂಡು, ತನ್ನ ಸಭಾಭವನಕ್ಕೆ ಬಂದು ಕುಳಿತು ಕೊಂಡನು. ಆಗ ಇಂದ್ರನು ಪಾರಿವಾಳದ ರೂಪ ಧರಿಸಿ ರಾಜೋದ್ಯಾನದ ಮೇಲಿಂದಾಗಿ ಹಾರುತ್ತಾ ಬಂದು, ಸಭಾಭವನದೊಳಗೆ ಪ್ರವೇಶಿಸಿದನು. ಯಮನು ಹದ್ದಿನ ರೂಪದಲ್ಲಿ ಆ ಪಾರಿವಾಳವನ್ನು ಓಡಿಸಿಕೊಂಡು ಬಂದನು.



ಆಯಾಸದಿಂದಲೂ ಭಯದಿಂದಲೂ ಬೆದರಿದ ಕಣ್ಣುಗಳಿಂದಲೂ ಶಕ್ತಿ ಕಳೆದುಕೊಂಡ ಆ ಪಾರಿವಾಳ ಶಿಬಿಯ ಪಾದದ ಹತ್ತಿರ ಬಿದ್ದು, "ರಾಜಾ, ನಾನು ನಿನಗೆ ಶರಣು ಬಂದೆ. ರಕ್ಷಿಸು ರಕ್ಷಿಸು ! ನನ್ನನ್ನು ಹದ್ದಿನ ಬಾಯಿಯಿಂದ ಕಾಪಾಡು," ಎಂದಿತು ದೀನ ಧ್ವನಿಯಿಂದ

ಅದು ಹಾಗೆ ಹೇಳುತ್ತಿರುವಾಗಲೇ ಹದ್ದು ಅಲ್ಲಿಗೆ ಬಂದು, "ರಾಜಾ, ಪಾರಿವಾಳವನ್ನು ಬಿಡು. ಹಸಿವೆಯಿಂದಿರುವ ನನಗೆ ನನ್ನ ಆಹಾರವನ್ನು ಬಿಟ್ಟುಕೊಡು " ಎಂದಿತು.

" ಪ್ರಭೂ ! ಶರಣಾಗತನನ್ನು ರಕ್ಷಿಸಿರಿ ! ರಕ್ಷಿಸಿರಿ !" ಎಂದು ಆರ್ತನಾದ ಮಾಡಿತು ಪಾರಿವಾಳ.

"ರಾಜಾ, ಎಂತಹ ದುರ್ಭಾಗ್ಯದವನೋ, ದೀನನೋ, ದಲಿತನೋ ಏನು ಕೇಳಿದರೂ ಕೊಡುವವನು ನೀನೆಂದು ಹೇಳುತ್ತಾರೆ. ಈ ಪಾರಿವಾಳವು ನನ್ನ ನ್ಯಾಯವಾದ ಆಹಾರವಾಗಿದೆ. ನಾನೂ ತುಂಬಾ ಹಸಿವೆಯಿಂದ ಬಳಲಿದ್ದೇನೆ. ಅದನ್ನು ನನಗೆ ಬಿಟ್ಟುಕೊಟ್ಟುಬಿಡು " ಎಂದಿತು ಹದ್ದು.

"ಶರಣಾಗತರನ್ನು ರಕ್ಷಿಸಬೇಕಾದುದು ಪರಮ ಧರ್ಮ. ನನ್ನ ಪಾಕಶಾಲೆಯಿಂದ ನಿನಗೆ ಬೇಕಾದಷ್ಟು ಮಾಂಸ ತರಿಸಿ ಕೊಡುತ್ತೇನೆ. ಪಾರಿವಾಳವನ್ನು ಬಿಡು " ಎಂದ ಶಿಬಿ.

"ಇನ್ನೊಬ್ಬರು ಕೊಂದ ಮಾಂಸವನ್ನು ನಾವು ಮುಟ್ಟುವವರಲ್ಲ. ಬಿಸಿರಕ್ತ ಓಡುವ ಸಜೀವವಾದ ಮಾಂಸವನ್ನೇ ತಿನ್ನುತ್ತೇವೆ. ಈ ಪಾರಿವಾಳಕ್ಕೆ ಬದಲಾಗಿ, ಅದರಷ್ಟು ಭಾರದ ನಿನ್ನ ಮಾಂಸವನ್ನು ಕೊಡುವುದಾದರೆ ಸರಿ. ಒಪ್ಪಿಕೊಳ್ಳುತ್ತೇನೆ. ಬೇರೆ ಮಾತಿಲ್ಲ. " ಎಂದಿತು ಹದ್ದು.

"ಸರಿ. ಹಾಗೆಯೇ ನನ್ನ ಮಾಂಸ ಕೊಡುತ್ತೇನೆ" ಎಂದು ಶಿಬಿ, ತನ್ನ ಕೋಶಾಗಾರದಿಂದ ತಕ್ಕಡಿಯನ್ನು ತರಲು ಆಜ್ಞೆ ಮಾಡಿದನು.

ಈ ಮಾತನ್ನು ಕೇಳಿ ಸಭೆಯಲ್ಲಿರುವ ರಾಜರೂ ಪುರಜನರೂ ಆಕ್ಷೇಪಣೆಯ ಕೊರಳೆತ್ತಿದರು. "ಈ ಹದ್ದು ತಮ್ಮನ್ನು ನಿರ್ಮೂಲ ಮಾಡಲು ಬಂದ ಯಾವನೋ ರಾಕ್ಷಸ" ಎಂದರು.

ಶಿಬಿ ಅವರ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ.

ಸೇವಕರು ತಕ್ಕಡಿ ತಂದು ಸಿದ್ಧ ಮಾಡಿಟ್ಟರು. ಶಿಬಿ ಪಾರಿವಾಳವನ್ನು ಒಂದು ತಟ್ಟೆಯಲ್ಲಿಟ್ಟು, ಕತ್ತಿಯಿಂದ ತನ್ನ ತೊಡೆಯ ಮಾಂಸವನ್ನು ಕೊಯ್ದು ತೆಗೆದು ಎರಡನೇ ತಟ್ಟೆಯಲ್ಲಿ ಹಾಕಿದನು. ಪಾರಿವಾಳದ ಭಾರವೇ ಹೆಚ್ಚಾಗಿದ್ದಿತು. ಶಿಬಿ ತನ್ನ ಶರೀರದ ಬೇರೆ ಬೇರೆ ಭಾಗಗಳಿಂದ ಮಾಂಸ ತೆಗೆದು ಹಾಕಿದರೂ ಪಾರಿವಾಳದ ಭಾರಕ್ಕೆ ಸಾಕಾಗಲಿಲ್ಲ.

ಕಡೆಗೆ ಶಿಬಿ ತಾನೇ ತಕ್ಕಡಿಯ ತಟ್ಟೆಯಲ್ಲಿ ಕುಳಿತುಬಿಟ್ಟನು. ಆಗ ತಾನೇ ತೂಕ ಸರಿಯಾಯಿತು. ಈ ಅಪೂರ್ವ ತ್ಯಾಗಕ್ಕೆ ದೇವದುಂದುಭಿಗಳು ಮೊಳಗಿ

ದುವು. ಆಕಾಶದಿಂದ ಪುಷ್ಪವೃಷ್ಟಿ ಸುರಿಯಿತು. ಎಲ್ಲಾ ದಿಕ್ಕುಗಳಿಂದಲೂ ಅಶರೀರ ವಾಕ್ಯಗಳು "ಭಲೇ! ಭಲೇ!" ಎಂದು ಮೊಳಗಿದುವು.

ಇಂದ್ರನೂ ಯಮನೂ ತಮ್ಮ ನಿಜ ರೂಪದಿಂದ ಪ್ರತ್ಯಕ್ಷರಾಗಿ, "ರಾಜಾ! ಮೆಚ್ಚಿದೆವು. ಪ್ರಾಣಿಗಳ ಮೇಲೆ ನಿನಗಿರುವ ಗಾಢ ಪ್ರೇಮದ ಆಳತೆಯನ್ನು ತಿಳಿದೆವು. ನೀನೊಬ್ಬನೇ ಸತ್ಯವೆಂದರೇನೆಂದು ತಿಳಿದವನು. ನಿನ್ನ ಶರೀರವು ಎಂದಿನಂತಾಗಲಿ!" ಎಂದು ಹೇಳಿ ಅದೃಶ್ಯರಾದರು.

ಪಾರಿವಾಳ ದಂಪತಿಗಳ ಆತ್ಮಾರ್ಪಣೆಯ ಕಥೆ: ಒಂದು ಕಾಡಿನಲ್ಲಿ ಒಬ್ಬ ಬೇಡನಿದ್ದ. ಉರುಳಿನ ಹಗ್ಗವನ್ನೆಸೆದು ಮೃಗಗಳನ್ನು ಹಿಡಿಯುವುದರಲ್ಲಿ ಅವನು ಬಲುಜಾಣ. ಒಂದುಸಾರಿ ಕಾಡಿನಲ್ಲಿ ಭಯಂಕರವಾದ ಗಾಳೀ ಮಳೆ ಬಂದಿತು. ಆ ಬೇಡನು ಸಂಪೂರ್ಣ ಒದ್ದೆ ಮುದ್ದೆಯಾಗಿ, ಒಂದು ಮರದ ಬುಡದಲ್ಲಿ ಗಡಗಡ ನಡುಗುತ್ತಾ ನಿಂತ. ಮಳೆ ನಿಂತರೂ ಅವನ ಚಳಿ ನಡುಕ ನಿಲ್ಲಲಿಲ್ಲ.

ಆ ಮರದ ಮೇಲೆ ಪಾರಿವಾಳ ದಂಪತಿಗಳ ಒಂದು ಜತೆ ಇದ್ದಿತು. ಹೆಣ್ಣು ಪಾರಿವಾಳ ಎಲ್ಲಿಗೋ ಹೋಗಿತ್ತು. ಗಂಡು ತನ್ನ ಹೆಂಡತಿಯನ್ನು ಆತುರದಿಂದ ಇದಿರು ನೋಡುತ್ತಿತ್ತು. ಅಷ್ಟರಲ್ಲಿ ಹೆಣ್ಣು ಪಾರಿವಾಳ ಬಂದು, ಮರದ ಬುಡದಲ್ಲಿರುವ ಬೇಡನ ಶೋಚನೀಯ ಪರಿಸ್ಥಿತಿ ನೋಡಿ ಕರಗಿತು. ಬೇಡನು ಅವುಗಳನ್ನು ನೋಡಿ "ನೀವಾದರೂ ನನ್ನ ಹಸಿವೆಗೂ ಚಳಿಗೂ ಏನಾದರೂ ಮಾಡಲಾರಿರಾ?" ಎಂದ.

ಗಂಡು ಪಾರಿವಾಳ ಗೂಡಿನೊಳಗಿನ ಒಣ ಪುರುಳೆಗಳನ್ನೂ ತರಗೆಲೆಗಳನ್ನೂ ಬೇಡನ ಇದಿರಿನಲ್ಲಿ ರಾಶಿ ಹಾಕಿ ಬೆಂಕಿ ಹಚ್ಚಿ, ಅವನ ಚಳಿಯನ್ನು ಹೋಗಲಾಡಿಸಿತು. "ಹಸಿವಿನಿಂದ ಪ್ರಾಣ ಹೋಗುತ್ತದಲ್ಲಾ" ಎಂದು ಬೇಡ ಗೊಣಗಿದ. "ನನ್ನನ್ನೇ ತಿನ್ನು" ಎಂದು ಗಂಡು ಪಾರಿವಾಳ ಆ ಉರಿಯಲ್ಲಿ ಬಿದ್ದು ಸುಟ್ಟು ಬೇಯತೊಡಗಿತು.

"ಗಂಡ ಹೋದ ಮೇಲೆ ನಾನೊಬ್ಬಳು ಬದುಕಿ ಏನು ಮಾಡಲಿ?" ಎಂದುಕೊಳ್ಳುತ್ತಾ, ಹೆಣ್ಣು ಪಾರಿವಾಳ ಕೂಡಾ ಬೆಂಕಿಯಲ್ಲಿ ಬಿದ್ದು ಸತ್ತಿತು. ಆಗ ಒಂದು ಚಿನ್ನದ ರಥವು ಬಂದು ಆ ಪಾರಿವಾಳಗಳನ್ನು ಅದರಲ್ಲಿ ಏರಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡು ಹೋಯಿತು.

ಅದನ್ನೆಲ್ಲಾ ನೋಡಿದ ಬೇಡನು ತನ್ನ ಕ್ರೂರ ಜೀವನಕ್ಕೆ ನಾಚಿಕೊಂಡು ಬೆಂದ ಪಾರಿವಾಳಗಳನ್ನು ತಿನ್ನದೆ, ಅರಣ್ಯದಲ್ಲಿ ನಡೆಯುತ್ತಾ ಹೋಗಿ, ಭಾರೀ ಕಾಡುಗಿಚ್ಚನ್ನು ನೋಡಿ, ಅದರಲ್ಲಿ ಬಿದ್ದು ತಾನೂ ಸುಟ್ಟುಹೋದನು.



# ೧೯೨. ಸಮುದ್ರ ಸೃಷ್ಟಿಸಿದ ಗುಹೆ

ಈ ಚಿತ್ರದಲ್ಲಿರುವ ಗುಹೆ ಅಲ್ಯೂಷಿಯನ್ ದ್ವೀಪಗಳಲ್ಲಿಯ ಟನಗಾ ದ್ವೀಪದಲ್ಲಿದೆ. ಯಾವುದೋ ಕೃತಯುಗದಲ್ಲಿ ಅಗ್ನಿಪರ್ವತವು ಸಿಡಿದು ೭೦ ಅಡಿಗಳಷ್ಟು ದಪ್ಪಕ್ಕೆ ಶಿಲಾದ್ರವವು ನಿಂತು, ಅದು ತಣ್ಣಗಾಗಿ ಸಂಕೋಚಗೊಳ್ಳುವಾಗ, ಅದರಲ್ಲಿ ಪರೆಗಳು ಏರ್ಪಟ್ಟು, ಮತ್ತೆ ಕೆಲವು ಸಾವಿರ ವರ್ಷಗಳ ಮೇಲೆ ಸಮುದ್ರದ ಹೊಡೆತದಿಂದ ಈ ಗುಹೆಯುಂಟಾಗಿದೆ. ಇದರ ಆಳ ೭೫ ಅಡಿಗಳು.





# ಋಣವಿಮುಕ್ತಿ

ಹಟದ ಪ್ರತಿ ರೂಪವೇ ತಾನಾಗಿ ಹೋದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ಭುಜದ ಮೇಲೆ ಹಾಕಿಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನಿನಗೆ ಜೀವಿತದ ಮೇಲೆ ವಿರಕ್ತಿ ಹುಟ್ಟಿದುದರಿಂದಲೇ ಹೀಗೆ ಶ್ರಮಪಡುವೆಯೇನೋ ನನಗೆ ತಿಳಿಯದು. ಆದರೆ ವಿರಕ್ತಿ ಉಂಟಾದವನಿಗೆ ಹಣೆಯಲ್ಲಿ ಬರೆದ ರೀತಿಯಲ್ಲಿ ಮರಣ ಕೂಡಾ ಬಾರದೆ ಹೋಗಬಹುದು. ಇದಕ್ಕೆ ನಿದರ್ಶನವಾಗಿ ನಿನಗೆ ಗೋಪಾಲಕನ ಕಥೆ ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ತೊಡಗಿತು :

ಒಂದು ಕಾಲದಲ್ಲಿ ಮಹಂತೀಪುರದಲ್ಲಿ ಗೋಪಾಲಕನೆಂಬ ಆಗರ್ಭದರಿದ್ರನಿದ್ದನು. ಅವನು ಪ್ರತಿ ದಿನಾ ಭಿಕ್ಷೆ ಎತ್ತಿಯೇ ಹೊಟ್ಟೆ ತುಂಬಿಸಿಕೊಂಡಿದ್ದನು. ಅವನ ಜಾತಕ ಎಷ್ಟು ಕೆಟ್ಟದಾಗಿತ್ತೆಂದರೆ, ಅವನಿಗೆ ಒಂದು ಹೊತ್ತಿಗೆ ಅನ್ನ ಸಿಕ್ಕಿದರೆ ಮೂರು ಹೊತ್ತು

ಬೇತಾಳಕಥೆಗಳು?...

ಉಪವಾಸವಿರಬೇಕಾಗುತಿತ್ತು. ಹೀಗಿರುವಾಗ ಒಂದು ದಿನ ರಾಮಾನಂದನೆಂಬ ಘನಜ್ಯೋತಿಷ್ಯನು ತನ್ನ ಶಿಷ್ಯಗಣದೊಂದಿಗೆ ಕಾಶಿಗೆ ಪ್ರಯಾಣ ಮಾಡುತ್ತ ಮಹಂತೀಪುರಕ್ಕೆ ಬಂದನು. ಆ ಊರಿನಲ್ಲಿರುವವರೆಲ್ಲರೂ ಅವನ ಹತ್ತಿರ ಹೋಗಿ ತಮ್ಮ ತಮ್ಮ ಸಮಸ್ಯೆಗಳನ್ನು ಕುರಿತು ಬಗೆ ಬಗೆಯ ಪ್ರಶ್ನೆಗಳನ್ನು ಕೇಳುತ್ತಿದ್ದರು.

ಜ್ಯೋತಿಷ್ಯನು ಎಲ್ಲರಿಗೂ ತೃಪ್ತಿಯಾಗುವಂತೆ ಉತ್ತರ ಹೇಳುತ್ತಿದ್ದನು. ಎಲ್ಲರೂ ತೃಪ್ತಿಯಿಂದ ಅವನನ್ನು ಹೊಗಳುತ್ತಿದ್ದರು. ಈ ವಿಷಯ ತಿಳಿದು ಗೋಪಾಲಕನಿಗೂ ಆಶೆಯಾಯಿತು. ಅವನು ಕೂಡಾ ರಾಮಾನಂದನ ಬಳಿಗೆ ಹೋಗಿ ತನ್ನ ದಾರಿದ್ರ್ಯಕ್ಕೆ ಕಾರಣವೇನೆಂದೂ, ಅದಕ್ಕೆ ನಿವಾರಣವೇನೆಂದೂ ಕೇಳಿದನು.

"ಅಪ್ಪಾ, ನೀನು ಕೊಟ್ಟು ಹುಟ್ಟಿದವನಲ್ಲ. ಆದ್ದರಿಂದ ನಿನ್ನ ದಾರಿದ್ರ್ಯವು ತೀರುವಂತಹುದಲ್ಲ. ಅದಕ್ಕಾಗಿ ಇನ್ನೇನೂ ಮಾಡುವಂತಿಲ್ಲ. ಕಷ್ಟವನ್ನು ತಾಳಿಕೊಡಿರಪ್ಪ," ಎಂದನು ರಾಮಾನಂದ.

"ಹೋಗಲಿ, ಕೊನೇಪಕ್ಷ ನನಗೆ ಸಾವು ಯಾವಾಗ ಬರುತ್ತದೆಂದು ಹೇಳುವಿರಾ? ಈ ಲೋಕದಿಂದ ಬೇಗ ಮುಕ್ತಿಯಾದರೆ ಒಳ್ಳೇದಿತ್ತು" ಎಂದ ಗೋಪಾಲಕ.

ರಾಮಾನಂದನು ಮತ್ತಿಷ್ಟು ಅವನ ಜೋಸ್ಯ ನೋಡಿ, "ನೋಡಪ್ಪಾ, ಪಕ್ಕದಲ್ಲಿರುವ ಪಟ್ಟಣದಲ್ಲಿ ರಾಮಯ್ಯಶೆಟ್ಟಿ, ಭೀಮಯ್ಯಶೆಟ್ಟಿ, ಸೋಮಯ್ಯಶೆಟ್ಟಿ ಎಂಬ ಮೂವರು ವ್ಯಾಪಾರಿಗಳಿದ್ದಾರೆ. ಅವರು ಒಬ್ಬೊಬ್ಬರೂ ನಿನಗೆ ಒಂದೊಂದು ಚಿನ್ನದ ಮೊಹರು ಋಣಪಟ್ಟಿದ್ದಾರೆ. ಆ ಬಾಕೀಯನ್ನು ವಸೂಲು ಮಾಡಿ ಅದನ್ನು ನೀನು ಅನುಭವಿಸಿದ ಕೂಡಲೇ ನಿನಗೆ ಮರಣ ಬರುತ್ತದೆ" ಎಂದನು ರಾಮಾನಂದ.

ಅದನ್ನು ತಿಳಿದು ಗೋಪಾಲಕನು ಸಂತೋಷದಿಂದ ರಾಮಾನಂದನಿಂದ ಅಪ್ಪಣೆ ಪಡೆದು ಕೂಡಲೇ ಪಟ್ಟಣಕ್ಕೆ ಹೋದನು. ಜ್ಯೋತಿಷ್ಯನು ಹೇಳಿದ



ಮೂವರು ವ್ಯಾಪಾರಸ್ಥರನ್ನೂ ನೋಡಿ, ಜ್ಯೋತಿಷ್ಯನು ತನಗ ಹೇಳಿದ ಮಾತನ್ನು ಹೇಳಿ ಕೈನೀಡಿದನು. ಆ ಮೂವರು ವ್ಯಾಪಾರಿಗಳೂ ಮರು ಮಾತಾಡದೆ ಒಂದೊಂದು ಬಂಗಾರದ ಮೊಹರಿಗಳನ್ನು ಅವನಿಗೆ ನೀಡಿದರು.

ಗೋಪಾಲಕನು ಆ ಮೂರು ಬಂಗಾರದ ನಾಣ್ಯಗಳಿಂದ ಬಡಜನರಿಗೆ ಅನ್ನದಾನ ಮಾಡುತ್ತ, "ಆಹಾ! ಈ ದಿನದಿಂದ ನನಗೆ ಈ ಪ್ರಪಂಚದಿಂದ ಮುಕ್ತಿದೊರಕುತ್ತದೆ. ಇನ್ನು ಯಾವ ಕ್ಷಣದಲ್ಲಾದರೂ ನನಗೆ ಸಾವು ಬರಬಹುದು. ಸತ್ತುಹೋದ ಮೇಲೆ ನನ್ನ ಕಳೇಬರವು ಯಾವ ವನಮೃಗಗಳಿಗೋ ಆಹಾರವಾಗುವುದೇ ಒಳ್ಳೆಯದು" ಎಂದುಕೊಂಡು, ಆ ನಾಣ್ಯಗಳನ್ನು ಖರ್ಚುಮಾಡಿ ಕಾಡಿಗೆ ಹೋಗಿ ಸಂಚರಿಸತೊಡಗಿದನು. ಬೇಗನೇ ಸಾವು ಬರಬೇಕೆಂದು ಏನನ್ನೂ ತಿನ್ನದೆ, ಬರುಬರುತ್ತಾ ಬಲಹೀನನಾದನು.

ಎರಡು ದಿನಗಳು ಕಳೆದುವು. ಗೋಪಾಲಕನು ಹಸಿವೆಯಿಂದ ಸಂಕಟಪಡತೊಡಗಿದನು. ಯಾವ ಹುಲಿಯೋ ಸಿಂಹವೋ ಅವನನ್ನು ನೋಡಿ ತಿನ್ನಲು ಬರಲೂ ಇಲ್ಲ. ಜ್ಯೋತಿಷ್ಯನ ಮಾತು ಏತಕ್ಕೆ ನಿಜವಾಗುವುದಿಲ್ಲವೋ ಎಂದು ಚಿಂತಿಸುತ್ತ, ತಿರುಗುತ್ತ, ನಿತ್ರಾಣದಿಂದ ಆಲುತ್ತ, ಮಾಲುತ್ತ ಕಡೆಗೆ ಕಾಲು ಜಾರಿ, ಯಾವುದೋ ಒಂದು ಒಣಬಾವಿಯೊಳಗೆ ಬಿದ್ದುಬಿಟ್ಟ.

"ಆಹಾ! ನನಗಾಗಿ ದೇವರು ಬಾವಿ ಕೂಡಾ ತೋಡಿಟ್ಟಿದ್ದಾನೆ. ಇನ್ನು ಸಾವು ಬರುವುದೇ ಬಾಕಿ!" ಎಂದುಕೊಳ್ಳುತ್ತ, ಬಿದ್ದ ನೋವನ್ನೂ ಲಕ್ಷ್ಯಮಾಡದೆ ಅವನು ಅತ್ತಿತ್ತ ತಲೆ ತಿರುಗಿಸಿಕೊಂಡಿದ್ದನು. ಆಗ ಕತ್ತಲೆಯಲ್ಲಿ ಅವನ ಕಣ್ಣಿಗೆ ಏನೋ ಹೊಳೆಯಿತು. ಗೋಪಾಲಕನು ಅದನ್ನು ತಡವಿ ಅದು ಬಂಗಾರದ ಗಟ್ಟಿಯೆಂದು ತಿಳಿದುಕೊಂಡನು. ಬಾವಿಯ ಒಂದು ಬದಿಯಲ್ಲಿ ಸುರಂಗವಿದ್ದಿತು. ಅದರೊಳಗೆ ಅಪಾರವೆನಿಸುವಷ್ಟು ಬಂಗಾರದ ರಾಶಿ! ಮತ್ತೆ ಅವನಿಗೆ ದಾನ ಮಾಡುವ ಆಶೆಯೂ ಅದಕ್ಕಾಗಿ ಬದುಕುವ ಬಯಕೆಯೂ ಉಂಟಾಗಿ, ಬಾವಿಯಿಂದ ಪಾರಾಗುವ



ಸಾಹಸವೂ ಬಂತು. ಅದೃಷ್ಟವೇ ಬದಲಾಯಿತು. ಗೋಪಾಲಕನು ಆ ಬಂಗಾರವನ್ನೆಲ್ಲಾ ತನ್ನ ಊರಿಗೆ ಸಾಗಿಸಿ ಅದರ ಸಹಾಯದಿಂದ ಒಂದು ಮನೆ ಪಡೆದು, ಬಡಜನರ ಕಷ್ಟಗಳನ್ನು ತೀರಿಸುತ್ತಾ, ಅವರ ಪಾಲಿನ ದೇವರೇ ಆಗಿ ದಿನಗಳೆಯ ತೊಡಗಿದನು. ಆಗರ್ಭದರಿದ್ರನಾದ ಗೋಪಾಲಕನಿಗೆ ಅಷ್ಟೊಂದು ಐಶ್ವರ್ಯ ಹೇಗೆ ಬಂತೆಂದು ಯಾರಿಗೂ ಅರ್ಥವಾಗ ಲಿಲ್ಲ. ಒಟ್ಟಿನ ಮೇಲೆ ಜ್ಯೋತಿಷ್ಕನು ಹೇಳಿದ ಮಾತು ಗೋಪಾಲಕನ ವಿಷಯದಲ್ಲಿ ನಿಜವಾಗಲೇ ಇಲ್ಲ. ಅವನು ಬಹಳ ಕಾಲ ಬದುಕಿಕೊಂಡಿದ್ದ. ಅವನ ಹತ್ತಿರ ಎಷ್ಟೇ ಐಶ್ವರ್ಯವಿದ್ದರೂ ಬಡವರೊಳಗೆ ತಾನೂ ಒಬ್ಬನಾಗಿಯೇ ಬದುಕಿದನು. ಸ್ವಲ್ಪವೂ ಆಡಂಬರಕ್ಕೆ ಹೋಗಲಿಲ್ಲ. ಆದುದರಿಂದಲೇ ಅವನು ಬಹಳ ಕಾಲ ಬಡಜನರಿಗೆ ಸಹಾಯಕನಾಗಿರಲು ಸಾಧ್ಯವಾಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ಗೋಪಾಲಕನು ಅದೇಕೆ ಜ್ಯೋತಿಷ್ಕನು ಹೇಳಿದಂತೆ ಸಾಯದೆ ಬದುಕಿದ್ದನು ? ರಾಮಾನಂದನ ಜ್ಯೋತಿಷ್ಯವು ಅರ್ಥಂಬರ್ಥವೆನ್ನುವೆಯಾ? ಅಥವಾ ದಾನಗುಣದ ಗೋಪಾಲಕನಿಗೆ ಬ್ರಹ್ಮಬರೆಹ ಮೀರು ವಂತಹ ವಿಶೇಷ ಶಕ್ತಿಯೇನಾದರೂ ಬಂತೆ? ಈ ಸಂದೇಹಕ್ಕೆ ಸರಿಯಾದ ಸಮಾಧಾನ ತಿಳಿದು ಕೂಡಾ ಹೇಳದೆಹೋದರೆ ನಿನ್ನ ತಲೆ ಒಡೆದು ಪುಡಿಪುಡಿ ಯಾಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರಾಮಾ ನಂದನದು ಅರ್ಥಂಬರ್ಥ ಜ್ಯೋತಿಷ್ಯವೇನಲ್ಲ. ಅವನು ಹೇಳಿದ ಜ್ಯೋತಿಷ್ಯ ಸುಳ್ಳಾಗಲೂ ಇಲ್ಲ. ಏಕೆಂದರೆ, ಗೋಪಾಲಕನು ವ್ಯಾಪಾರಿಗಳಿಂದ ಪಡೆದು ಕೊಂಡ ನಾಣ್ಯಗಳನ್ನು ತಾನು ಅನುಭವಿಸಿಕೊಳ್ಳುವು ದನ್ನು ಬಿಟ್ಟು ದಾನಧರ್ಮ ಮಾಡಿ, ತನ್ನ ಋಣ ವನ್ನು ಇತರರಿಗೆ ಹಂಚಿದನು. ಆ ಮೂರು ಬಂಗಾ ರದ ಮೊಹರಿಗಳನ್ನೂ ತಾನೇ ವಿನಿಯೋಗಿಸಿಕೊಂಡು ಸುಖಪಡುತ್ತಿದ್ದರೆ ಅವನಿಗೆ ಮರಣ ಬರುತ್ತಿತ್ತು. ಆದರೆ ಅವನಲ್ಲಿರುವ ದಾನಬುದ್ಧಿ ಅವನನ್ನು ಹಾಗೆ ಮಾಡಲು ಬಿಡಲಿಲ್ಲ. ಕಡೆಗೆ ಸತ್ತುಹೋದರೆ ತನ್ನ ಶರೀರವು ಒಂದಿಷ್ಟು ಬೂದಿಯಾಗುವುದಕ್ಕೆ ಬದ ಲಾಗಿ ಯಾವ ಪ್ರಾಣಿಗಳಿಗಾದರೂ ಆಹಾರವಾಗ ಬೇಕೆಂದು ಬಯಸಿಕೊಂಡಿದ್ದನು. ಆ ವಿಧವಾಗಿ ಅವ ನಿಗೆ ಮತ್ತಷ್ಟು ಬಂಗಾರವು ದೊರಕಿತು. ಅದ ರೊಂದಿಗೆ ಅವನಿಗೆ ಋಣಿಯಾಗುವವರ ಸಂಖ್ಯೆಯೂ ಅಪಾರವಾಗಿ ಬೆಳೆಯಿತು."

ಹೀಗೆ ರಾಜನಿಗೆ ಮೌನಭಂಗವಾಗುತ್ತಲೇ ಬೇತಾ ಳವು ಶವದೊಂದಿಗೆ ಮಾಯವಾಗಿ ಹೋಗಿ, ಮತ್ತೆ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಬಲಿಷ್ಠ ಶತ್ರು

ಒಂದು ಕಾಲದಲ್ಲಿ ರಂಗಪುರದ ರಾಜಮ್ಮನೆಂದರೆ ಎಲ್ಲರೂ ಹೆದರುತ್ತಿದ್ದರು. ದೊಡ್ಡ ಗಯ್ಯಾಳಿ ಹೆಂಗುಸು. ಅವಳು ಯಾವಾಗಲೂ ಯಾರದೋ ತಪ್ಪುಗಳನ್ನು ಹುಡುಕುತ್ತಾ ಬೈದುಕೊಂಡಿರುವಳು. ಎಲ್ಲರೂ ಮಾಡುವುದೂ ಮಾತಾಡುವುದೂ ತಪ್ಪೇ, ತನ್ನದು ಮಾತ್ರವೇ ಸರಿ ಎಂಬ ಭಾವ ಅವಳಲ್ಲಿ ಹುದುಗಿಹೋಗಿತ್ತು. ಮನೆಯಲ್ಲಿ ಕೂಡಾ ಅಷ್ಟೇ.

ಹೀಗಿದ್ದರೂ ಅವಳಿಗೆ ಮಗ ವೀರಯ್ಯನ ಮೇಲೆ ಮಾತ್ರ ತುಂಬ ಇಷ್ಟ, ಅಕ್ಕರೆ. ಅವಳು ಅವನನ್ನು ಬಹಳ ಪ್ರೇಮದಿಂದ ಮುದ್ದುಮಾಡಿ ಬೆಳೆಸಿದ್ದಳು. ಅವನಿಗೀಗ ಮದುವೆಯ ಪ್ರಾಯವೂ ಬಂದಿತ್ತು. ಆದರೆ ಅವನ ತಾಯಿ ಮೊಸರಲ್ಲಿ ಕಲ್ಲು ಹುಡುಕುವ ಜಗಳಗಂಟಿಯೆಂದು ಪ್ರಸಿದ್ಧಳಾದುದರಿಂದ ಹುಡುಗಿಯನ್ನು ಕೊಡಲು ಯಾರೂ ಮುಂದೆ ಬರಲಿಲ್ಲ.

ಒಂದು ಸಾರಿ ವೀರಯ್ಯ ಏನೋ ಕೆಲಸದ ಮೇಲೆ ದೂರದಲ್ಲಿದ್ದೊಂದು ಗ್ರಾಮಕ್ಕೆ ಹೋಗಿ, ಆ ಊರಿನ ಕೆರೆಯ ಬಳಿಯಲ್ಲಿ ಸುಂದರಿಯಾದೊಬ್ಬಳು ಹುಡುಗಿಯನ್ನು ನೋಡಿದನು. ಆಗಲೇ ಅವನ ಬುದ್ಧಿಗೆ ಮಂಕು ಕವಿದಂತಾಗಿ ಅವಳ ಹಿಂದೆ ಅವಳ ಮನೆಯವರೆಗೂ ಹೋದನು. ಆ ಹುಡುಗಿಗೂ ಅವನ ಮೇಲೆ ಇಷ್ಟವಿರುವಂತೆ ತೋರಿತು.

ಅವಳ ಹೆಸರು ಇಂದಿರೆ ಎಂದೂ ವೀರಯ್ಯನಿಗೆ ಗೊತ್ತಾಯಿತು. ಅವನು ಅವಳ ತಂದೆ ತಾಯಿಗಳನ್ನು ನೋಡಿ, ಅವರ ಮಗಳನ್ನು ತನಗೆ ಮದುವೆಯಾಗುವ ಆಶೆಯಿದೆಯೆಂದು ಹೇಳಿದನು.

ಅದನ್ನು ಕೇಳಿ ಅವಳ ತಂದೆ ತಾಯಂದಿರು ತಮ್ಮೊಳಗೆ ಏನೋ ಗುಸುಗುಸ ಮಾತಾಡಿಕೊಂಡರು. ಆಮೇಲೆ ಅವಳ ತಂದೆ ವೀರಯ್ಯನೊಂದಿಗೆ, "ನೋಡಪ್ಪಾ, ಇರುವ ಸಂಗತಿ ಮೊದಲೇ ತಿಳಿಸಿಬಿಡುವುದು ಒಳ್ಳೆಯದು. ನಮ್ಮ ಮಗಳು ತುಂಬಾ ಗಯ್ಯಾಳಿ. ಎಲ್ಲದಕ್ಕೂ ಜಗಳ ಮಾಡುತ್ತಾಳೆ. ಅದಕ್ಕೇ ಅವಳಿಗೆ ಇನ್ನೂ ಸಂಬಂಧ ಬಾರದೆ ಮದುವೆಯಾಗದಿದ್ದಾಳೆ. ಈ ಸಂಗತಿ ತಿಳಿಯದೆ ಹೋಯಿತೆಂದು ಆಮೇಲೆ ಪಶ್ಚಾತ್ತಾಪ ಪಡಬಾರದು. ಇನ್ನು ನಿನಗಿಷ್ಟವಿದ್ದರೆ ಮದುವೆಯಾಗ ಬಹುದು" ಎಂದನು.

ವೀರಯ್ಯ ಅವರಿಗೆ ತನ್ನ ತಾಯಿಯ ಸಮಾಚಾರ ಹೇಳಿದನು. ಹಾಗಾದರೆ ಮತ್ತೇನು? ಅಂಥಾ ಅತ್ತೆಯ ಮೂಲಕವಾಗಿಯಾದರೂ ತಮ್ಮ ಮಗಳ



ಬುದ್ಧಿ ಬದಲಾಗಬಹುದೆಂಬ ಆಶೆಯಿಂದ, ಅವನಿಗೆ ಇಂದಿರೆಯನ್ನು ಕೊಟ್ಟು ಮದುವೆ ಮಾಡಿಬಿಟ್ಟರು. ವೀರಯ್ಯನು ತಾಯಿಗೆ ತನ್ನ ಮದುವೆಯ ಸುದ್ದಿ ತಿಳಿಸುವ ಗೋಜಿಗೇ ಹೋಗಲಿಲಿಲ್ಲ.

ಒಮ್ಮೆಗೇ ಹೆಂಡತಿಯನ್ನು ಕರೆದುಕೊಂಡು ಬಂದ ವೀರಯ್ಯನನ್ನು ನೋಡಿ, ರಾಜಮ್ಮ ಮೊದಲು ಬೆಕ್ಕಸಬಾದರೂ, ಕಡೆಗೆ ಅಂತೂ ತನ್ನ ಮಗನಿಗೆ ಯಾರೋ ಒಬ್ಬರು ಹುಡುಗಿ ಕೊಟ್ಟರಲ್ಲವೆ? ಎಂದು ಕೊಂಡು ಸಂತೋಷ ಪಟ್ಟಳು. ಹುಡುಗಿಯೂ ಕಣ್ಣು ಮೂಗಿನಿಂದ ಚೆಂದಾಗಿದ್ದಾಳೆ! ಅಂತೆಯೇ ಒಂದು ತಿಂಗಳ ವರೆಗೂ ಅತ್ತೆ ಸೊಸೆಯರೊಳಗೆ ಯಾವ ತಕರಾರೂ ಬರಲಿಲ್ಲ. ಒಂದು ತಿಂಗಳವರೆಗೆ ಮಗನಿಗೂ ಸೊಸೆಗೂ ಯಾವುದೊಂದು ಕೊರತೆಯೂ ಬಾರದಂತೆ ತಾನೇ ಎಲ್ಲವನ್ನೂ ಮಾಡುತ್ತಿದ್ದಳು. ಕಡೆಗೆ ಸೊಸೆ ಸುಖ ಪಡುವಳೆಂದು ತಿಳಿದಾಗ ಮಾತ್ರ ಅವಳಿಗೆ ಕಿಚ್ಚೆದ್ದಿತು. ಆಮೇಲೆ ಸೊಸೆಗೂ ಕೆಲಸ ಹೇಳಲು ಪ್ರಾರಂಭಿಸಿದಳು. ಹೀಗೆ ಇನ್ನೊಂದು ತಿಂಗಳು ಕಳೆಯಿತು.

ಅಷ್ಟು ಹೊತ್ತಿಗೆ ಅತ್ತೆಗೆ ಹೊಸ ಸೊಸೆಯ ಮೇಲೆ ಮೋಜು ತಗ್ಗಿ, ಅವಳು ಮಾಡುವ ಕೆಲಸ ಗಳಲ್ಲಿ ತಪ್ಪು ಹುಡುಕಿ ಹೇಳುತ್ತ ನಿಂದಿಸಲು ತೊಡಗಿದಳು. ಮಾತಿಗೆ ಮಾತು ಸೊಸೆಯೂ ಬಿಟ್ಟು ಕೊಡದೆ ಸಮಾಧಾನ ಹೇಳಲು ತೊಡಗಿದಳು. ಅದು ಜಗಳದ ರೂಪ ತಳೆಯುತ್ತಿತ್ತು.

ಒಂದು ದಿನ ವೀರಯ್ಯ ಹೊಲದ ಕಡೆಯಿಂದ ಬರುವಾಗ ಮನೆಯಲ್ಲಿ ಅಡಿಗೆಯಾಗಿರಲಿಲ್ಲ. ಅತ್ತೆ ಸೊಸೆಯ ಮೇಲೆಯೂ, ಸೊಸೆ ಅತ್ತೆಯ ಮೇಲೆಯೂ ಹತ್ತಾಗಿ ನೂರಾಗಿ ಅವನೊಂದಿಗೆ ದೂರಿದರು. ಅವನು ಇಬ್ಬರನ್ನೂ ಬೈದನು. ಆಗ ಇಬ್ಬರೂ ಅವನ ಮೇಲೆಯೇ ಜಗಳಕ್ಕೇರಿ ಬಂದರು. ಹೆಂಡತಿ ನಿನಗೆ ಬೆಲ್ಲವಾದಳೆಂದು ತಾಯಿ ಆಕ್ಷೇಪಿಸಿದಳು. ತಾಯಿಯ ಸೆರಗು ಹಿಡಿದುಕೊಂಡೇ ತಿರುಗುವವನು ಏಕೆ ಮದುವೆಯಾಗಬೇಕಿತ್ತು? ಎಂದು ಕೇಳಿದಳು ಇಂದಿರೆ.

ಹೀಗೆ ಇಬ್ಬರ ನಡುವೆ ಸಿಕ್ಕಿಕೊಂಡ ವೀರಯ್ಯನಿಗೆ ಮನೆಯೊಂದು ನರಕದಂತಾಯಿತು. ಎಷ್ಟಾದರೂ ಅವನು ಮೃದು ಮನುಷ್ಯ. ಅವರಿಬ್ಬರ ನಡುವೆ ಜಬ್ಬಿಯಾಗಲು ಇಷ್ಟವಿಲ್ಲದೆ, ಅವನು ಇಬ್ಬರ ಮಾತನ್ನು ಹಚ್ಚಿಕೊಳ್ಳದೆ ದೂರದೂರವೇ ಇರಲು ಅಭ್ಯಾಸ ಮಾಡಿಕೊಂಡನು. ಹೀಗೆ ಅವನು ಜಡಿದಿಟ್ಟ ಕಲ್ಲಾಗಿರುವುದಕ್ಕೂ ಇಬ್ಬರಿಂದಲೂ ಬೈಗಳು ತಿನ್ನ ಬೇಕಾಯಿತು. ಆದರೂ ಸುಮ್ಮನಿದ್ದ.

ಒಂದು ಸಾರಿ ವೀರಯ್ಯ ಆ ಊರಿನ ಜಮೀನ್ದಾರ್ರ ಮಗನನ್ನು ಹಾವಿನ ಕಡಿತದಿಂದ ಪಾರುಮಾಡಿ ಬಿಟ್ಟನು. ಅದಕ್ಕಾಗಿ ಜಮೀನ್ದಾರ್ರು ಅವನ ಧೈರ್ಯ ವನ್ನು ಮೆಚ್ಚಿ, ತಮಗಿರುವ ಹಸುಗಳಲ್ಲಿ ಒಂದನ್ನು ಹೊಡೆದುಕೊಂಡು ಹೋಗುವಂತೆ ಹೇಳಿದರು. ವೀರಯ್ಯ ಈ ಸಂಗತಿಯನ್ನು ಉತ್ಸಾಹದಿಂದ ಮನೆ

ಯಲ್ಲಿ ಹೇಳಿದನು. "ಗೋಮಾತೆ ಮನೆಗೆ ಬರುವುದು ಶುಭಕರ!" ಎಂದಳು ರಾಜಮ್ಮ.

"ಶುಭಮಾತ್ರ ನೋಡಿದರಾಯಿತೇ? ಎಮ್ಮೇನೇ ಹೊಡೆದುಕೊಂಡು ಬನ್ನಿ. ಮನೆಗೆ ಥಂಡಿಯಾಗಿ ಹಾಲಾಗುತ್ತೆ!" ಎಂದಳು ಇಂದಿರೆ.

ಈ ಮಾತೇ ಕಡೆದು ಕಡೆದು ಗಾಳಿ ಮಳೆಯಾಯಿತು. ಈ ಮೇಲಾಟ ನೋಡಿ ವೀರಯ್ಯನ ಬುದ್ಧಿ ಮಣ್ಣುಮುಕ್ಕಿತು. ಅವರ ವಾದ ಪ್ರತಿವಾದಗಳು ನಿಲ್ಲುವುದೇನೋ ನೋಡಿದ. ಅದೇನೂ ನಿಲ್ಲಲಿಲ್ಲ. ರಾಜಮ್ಮ ಪ್ರಪಂಚದಲ್ಲಿರುವ ಎಮ್ಮೆಗಳನ್ನೆಲ್ಲಾ ಜಾಳಿಸಿ ಚೆಲ್ಲಿದಳು. ಇಂದಿರೆ ಗೋವುಗಳ ಮೇಲೆಲ್ಲಾ ಧೂಳೆತ್ತಿ ಚಿಮ್ಮಿದಳು. ವೀರಯ್ಯ ಪರಮ ವೈರಾಗ್ಯದಿಂದ ಹೊರಟುಹೋದ.

ಮರುದಿನ ಹೊಲದ ಹತ್ತಿರ ವೀರಯ್ಯನನ್ನು ನೋಡಿ ಜಮೀನ್ದಾರರು "ನಿನ್ನೆ ಬಂದು ಹಸುವನ್ನು ಕೊಂಡೊಯ್ಯಲಿಲ್ಲವೇನೋ?" ಎಂದು ಕೇಳಿದರು. ವೀರಯ್ಯ ತನ್ನ ಮನೆಯೊಳಗಿನ ಗುಟ್ಟು ತಾನು ಬಿದ್ದ ಇಕ್ಕಟ್ಟುಗಳನ್ನು ಅವರೊಡನೆ ತೋಡಿಕೊಂಡ.

"ಅರರೇ! ನನ್ನ ಕೊಟ್ಟಿಗೆಯಲ್ಲಿದ್ದ ಎಮ್ಮೆಗಳನ್ನೆಲ್ಲಾ ಮಾರಿಬಿಟ್ಟೆನಲ್ಲಾ! ಅವುಗಳ ಸೇವೆ ಸಾಕಾಗಿ ಹೋಯಿತು. ಈಗ ಹಸುಗಳಷ್ಟೇ ಇವೆ. ನಿನಗೆ ಹಿಡಿಸಿದ ಒಂದು ಹಸುವನ್ನು ಒಯ್ದುಬಿಡು" ಎಂದರು ಜಮೀನ್ದಾರರು.

ತನ್ನ ಸಮಸ್ಯೆ ಹೀಗೆ ಪರಿಷ್ಕಾರವಾದುದನ್ನು ತಿಳಿದು ಸಂತೋಷಪಟ್ಟು ವೀರಯ್ಯ ಮನೆಗೆ ಬಂದು ಆ ಸಂಗತಿಯನ್ನು ಹೇಳಿದನು. ರಾಜಮ್ಮ ಬಹಳ ಸಂತೋಷದಿಂದ, "ಅಬ್ಬ! ನಮ್ಮನೆಗೆ ಎಮ್ಮೆ ಬಾರದಂತೆ ದೇವ್ರೇ ಕಾಪಾಡಿದ!" ಎಂದಳು.

"ಹೂಂ. ಎಮ್ಮೆ ತಂದುಕೊಳ್ಳುವ ಪುಣ್ಯ ಎಲ್ಲರಿಗೂ ಇರೋದಿಲ್ಲ" ಎಂದಳು ಇಂದಿರೆ. "ನಾವು ಪಾಪಿಷ್ಠರೆನ್ನುವಿಯೇನೇ?" ಎಂದು ಅತ್ತೆ ಸೊಸೆಯ



ಮೇಲೆ ಹೆಡೆಯೆತ್ತಿದಳು. ಸೊಸೆ ಅತ್ತೆಗೆ ಏನೂ ಕಡಿಮೆಯಾವಳಾಗಲಿಲ್ಲ. ಅವರು ಹೆಡೆ ಹೆಡೆ ಬಡೆದುಕೊಳ್ಳುತ್ತಿರಲು, ಇದೇನೂ ಮುಗಿಯುವಂತಿಲ್ಲ ಎಂದುಕೊಂಡು ವೀರಯ್ಯ "ನಾನು ಹೋಗಿ ಹಸುವನ್ನು ತರುತ್ತೇನೆ" ಎಂದನು.

"ಅದಾದರೂ ಕಪ್ಪು ದನವನ್ನೇ ತನ್ನಿ. ಬಣ್ಣವನ್ನಾದರೂ ನೋಡಿ ತೃಪ್ತರಾಗೋಣ" ಎಂದಳು ಇಂದಿರೆ.

"ಅಶುಭದ್ದು ಕಪ್ಪು ಬಣ್ಣ ಯಾಕೇಪ್ಪಾ? ಬಿಳಿಯೇ ಶುಭ. ಬಿಳಿಯದೇ ತಾ!" ಎಂದಳು ಅತ್ತೆ.

"ಕಪ್ಪು ಅಶುಭಾ ಆದ್ರೆ, ನಿಮ್ಮ ಮೂತಿ ಬೆಳ್ಳಗಿದೆಯೇನು?" ಎಂದು ಇಂದಿರೆ ಕೇಳಲು, "ಬೆಳ್ಳಗನ್ನು ಬಯ್ಯುವ ನೀನು ಬೆಳ್ಳಗಿಲ್ಲವೇನೆ?" ಎಂದು ಅತ್ತೆ ತಿರುಗಿ ಕೇಳಲು, "ನಾನು ಬೆಳ್ಳಗಿದ್ರೆ ಉರ್ಲು ಹಾಕ್ಕೊಂಡು ಸತ್ತೇನು. ನನ್ನದು ಬಂಗಾರದ ಬಣ್ಣ ಗೊತ್ತಾ?" ಎಂದಳು ಇಂದಿರೆ.

ಹೀಗೆ ಅವರು ಮಾತಿಗೆ ಮಾತು ಎಳೆದಾಡಿ ಕೊಂಡಿರಲು, ವೀರಯ್ಯ ತಾನೇ ಬಡಿಸಿಕೊಂಡು ಊಟಮಾಡಿ ಮಲಗಿಬಿಟ್ಟನು.

ಮಾರುದಿನ ವೀರಯ್ಯನನ್ನು ನೋಡಿ ಜಮೀನ್ದಾರರು ಏಕೆ ಬರಲಿಲ್ಲವೆಂದು ಕೇಳಿದರು. ವೀರಯ್ಯ ತನಗೆ ಬಂದ ಕಷ್ಟವನ್ನು ಹೇಳಿದ.

"ನನಗೆ ಅತ್ತೆ ಸೊಸೆಯವರ ತಂಟೆಯಿಲ್ಲವಾದರೂ ಇಬ್ಬರು ಹೆಂಡತಿಯರಿದ್ದಾರೆ. ಅವರು ಮೊದಲು ಹೀಗೇ ಜಗಳಾಡಿಕೊಂಡಿದ್ದರು. ಕಡೆಗೆ ಒಳ್ಳೆಯ ಉಪಾಯದಿಂದ ಇಬ್ಬರಿಗೂ ಸ್ನೇಹ ಮಾಡಿಸಿಬಿಟ್ಟೆ" ಎಂದರು ಜಮೀನ್ದಾರರು.

"ಆ ಉಪಾಯ ನನಗೂ ಹೇಳಿಬಿಡಿ ಸ್ವಾಮಿ" ಎಂದು ಬೇಡಿದ ವೀರಯ್ಯ.

"ಇಬ್ಬರು ಶತ್ರುಗಳು ಒಂದಾಗಬೇಕಾದರೆ ಅವರಿಗೆ ತಮಗಿಂತ ಬಲಿಷ್ಠನಾದ ಶತ್ರುವೊಬ್ಬನಿರಬೇಕು" ಎಂದರು ಜಮೀನ್ದಾರರು.

"ಅಂಥವನನ್ನು ನಾನೆಲ್ಲಿ ಹುಡುಕಲಿ ಸ್ವಾಮಿ?" ಎಂದ ವೀರಯ್ಯ. "ಅದು ನೀನೇ ಆಗು!" ಎಂದರು ಜಮೀನ್ದಾರರು ನಗುತ್ತ.

ಏನು ಮಾಡಬೇಕೆಂದು ವೀರಯ್ಯನಿಗೆ ತಿಳಿಯಿತು. ಅವನು ಅಂದು ಸಂಜೆ ಜಮೀನ್ದಾರರ ಮನೆಯಿಂದ ಕೆಂಪು ದನವನ್ನು ಕರುವಿನೊಂದಿಗೆ ತೆಗೆದುಕೊಂಡು ಹೋದನು. ಅತ್ತೆ ಸೊಸೆಯರು ಅದನ್ನು ನೋಡಿ ಇಬ್ಬರೂ ಅವನ ಮೇಲೆ ಮುಗಿಬಿದ್ದರು.

"ಸುಮ್ಮನಿರಮ್ಮ! ಬದುಕಿದಷ್ಟು ಕಾಲ ಇನ್ನು ನೀನಿರಲಾರೆ. ನಮ್ಮನ್ನು ಬಯ್ದು ಏನು ಕಟ್ಟಿಕೊಳ್ತೀ? ಸುಮ್ಮನಿರು!" ಎಂದು ಆರ್ಭಟಿಸಿ ತುಂಬ ಬೈದನು.

ಗಂಡ ತನ್ನ ಪಕ್ಷದವನಾದನೆಂದು ಇಂದಿರೆ ಮತ್ತಿಷ್ಟು ಬಾಯಿ ರಭಾಡಿಸಿದಳು.

"ನಿನ್ನ ಕೆಲಸ ನೋಡಿ ಬಾಯಿ ಮುಚ್ಚು! ಗಂಡು ಸರ ವ್ಯವಹಾರದಲ್ಲಿ ತಲೆ ಹಾಕಿದರೆ ಜೋಕೆ! ಜಮೀನ್ದಾರರು ಕೊಟ್ಟದ್ದು ನನಗೆ ಹಿಡಿಸಿದ್ದು ನಾನು ತಂದೆ. ಇದನ್ನು ಕುರಿತು ಏನಾದರೂ ಮಾತಾಡಿದರೆ ಎಮ್ಮೆಯನ ಬಡೀವ ಹಾಗೆ ಬಡಿದು ಹಾಕೇನು!" ಎಂದ ಹೆಂಡತಿಯೊಂದಿಗೆ.

ಅವನು ಹಾಗೆ ಎರಡು ದಿನಗಳವರೆಗೆ ತಾಯಿಯನ್ನು ಹೊಡೆಯುವವನಂತೆ, ಹೆಂಡತಿಯನ್ನು ಹೊಡೆದು ಒಂದ ವರ್ತಿಸಿದುದರಿಂದ, ಅತ್ತೆ ಸೊಸೆಯರೊಳಗೆ ಸಖ್ಯತೆಯುಂಟಾಯಿತು. ವೀರಯ್ಯನೆಂದರೆ ಇಬ್ಬರಿಗೂ ಭಯ. ಅವನು ಮನೆಯಲ್ಲಿರುವಾಗ ಇಬ್ಬರೂ ಕಿಂ ಕಂ ಎನ್ನುತ್ತಿರಲಿಲ್ಲ. ಅವನು ಹೊರಗೆ ಹೋದ ಮೇಲೆ ಇಬ್ಬರೂ ಅವನ ಮೇಲೆ ಚಾಡೀ ಹೇಳಿಕೊಳ್ಳುತ್ತ ಕ್ರಮೇಣ ಅನ್ಯೋನ್ಯರಾಗಿರತೊಡಗಿದರು.



# ಒಳಗುಟ್ಟು

ವೀರಸ್ವಾಮಿಗೆ ನಗರದಲ್ಲಿ ಕೆಲಸ. ತನ್ನ ಊರಲ್ಲಿದ್ದುದನ್ನೆಲ್ಲಾ ಮಾರಿಬಿಟ್ಟಿದ್ದನು. ಬಹಳ ಕಾಲದ ಮೇಲೆ ಅವನು ತನ್ನ ಊರಿಗೆ ಬಂದನು. ಅವನ ಪ್ರಾಣಮಿತ್ರರಾದ ನೆರೆಕರೆ ಮನೆಗಳ ಭೂಪಾಲನೂ ಗೋಪಾಲನೂ ಅವನನ್ನು ತಮ್ಮ ಮನೆಯಲ್ಲೇ ಇರಬೇಕೆಂದು ಒತ್ತಾಯಿಸಿದರು. ಇಬ್ಬರ ಮನೆಯಲ್ಲಿಯೂ ಎರಡೆರಡು ದಿನ ಇರುವುದಾಗಿ ವೀರಸ್ವಾಮಿ ಒಪ್ಪಿಕೊಂಡ.

ಮೊದಲು ಅವನು ಭೂಪಾಲನ ಮನೆಗೆ ಹೋದ. ಭೂಪಾಲನೂ ಅವನ ಹೆಂಡತಿ ರಮಾಳೂ ಅವನನ್ನು ಚೆನ್ನಾಗಿ ಉಪಚರಿಸಿದರು. ಆದರೆ ಭೂಪಾಲ ವೀರಸ್ವಾಮಿಯನ್ನು ಒಂಟಿಯಾಗಿ ಬಿಡದೆ, ತಾನು ಹೋದಲ್ಲಿಗೆಲ್ಲಾ ಅವನನ್ನೂ ಕರೆದು ತಿರುಗಿಸಿದನು. ಆಮೇಲೆ ವೀರಸ್ವಾಮಿ ಗೋಪಾಲನ ಮನೆಗೆ ಹೋದಾಗ, ಅಲ್ಲಿಯೂ ಗಂಡಹೆಂಡಿರು ಅವನಿಗೆ ಒಳ್ಳೆಯ ಉಪಚಾರ ಮಾಡಿದರು. ಅಲ್ಲಿಯೂ ಗೋಪಾಲನು ವೀರಸ್ವಾಮಿಯನ್ನು ಒಬ್ಬಂಟಿಗನನ್ನಾಗಿ ಬಿಡದೆ ತನ್ನೊಂದಿಗೇ ತಿರುಗಿಸಿದನು.

ಇದರ ರಹಸ್ಯವನ್ನು ತಿಳಿದುಕೊಳ್ಳಲು ವೀರಸ್ವಾಮಿ ಅಲ್ಲಿಂದ ಹೊರಟು ಹೋಗಿ ಅಕಸ್ಮಾತ್ ತಿರುಗಿ ಬಂದನು. ಆಗ ಆ ಎರಡು ಮನೆಗಳ ಹಿಂದಿನಿಂದ ಅವನ ಮಿತ್ರರಿಬ್ಬರ ಹೆಂಡತಿಯರು ಹೋರಾಹೋರಿಯಾಗಿ ಜಗಳ ಮಾಡುತ್ತಿದ್ದರು. ಈ ಸಮಾಚಾರವನ್ನು ಅವನು ತನ್ನ ಮಿತ್ರರಿಗೆ ಹೇಳಿದನು. ಅವರಿಬ್ಬರಿಗೂ ನಾಚಿಕೆಯಾಯಿತು.

"ನೀವು ಕೆಲಸದಾಳುಗಳನ್ನು ತೆಗೆದು ಹಾಕಿ ನಿಮ್ಮ ಹೆಂಡತಿಯರಿಗೆ ತುಂಬಾ ಕೆಲಸ ಕಲ್ಪಿಸಿರಿ. ಆಗ ಅವರಿಗೆ ಜಗಳಾಡಲು ಸಮಯ ಸಿಕ್ಕುವದಿಲ್ಲ." ಎಂದು ವೀರಸ್ವಾಮಿ ತನ್ನ ಮಿತ್ರರಿಗೆ ಆಲೋಚನೆ ಹೇಳಿದ. ಅದು ಒಳ್ಳೆಯ ಪರಿಣಾಮ ಮಾಡಿಸಿತು.





# ಅಪಾತ್ರದಾನ

ಹಿಂದೆ ಒಂದಾನೊಂದು ಊರಿನಲ್ಲಿ ಗಂಗಯ್ಯ ಮತ್ತು ದುರ್ಗಯ್ಯ ಎಂಬ ಸ್ನೇಹಿತರಿಬ್ಬರು ಧಾನ್ಯದ ವರ್ತಕ ಮಾಡುತ್ತಿದ್ದರು. ಅವರಿಬ್ಬರೂ ಕೂಡಿಯೇ ವ್ಯಾಪಾರ ಮಾಡಿಕೊಂಡಿದ್ದರು. ಅನೇಕ ವರ್ಷಗಳಿಂದ ಒಟ್ಟಾಗಿರುತ್ತಿದ್ದ ಅವರೊಳಗೆ ಯಾವ ಜಗಳವೂ ಉಂಟಾಗಿರಲಿಲ್ಲ. ಅವರೊಳಗಿನ ಅನ್ಯೋನ್ಯತೆಯನ್ನು ನೋಡಿ, ಊರೊಳಗೆ ಯಾರಾದರೂ ಅಣ್ಣತಮ್ಮಂದಿರು ಜಗಳಾಡಿದರೆ ಹಿರಿಯರು, "ಗಂಗಯ್ಯ ದುರ್ಗಯ್ಯರನ್ನು ನೋಡಿಯಾದರೂ ಬುದ್ಧಿ ಕಲಿತುಕೊಳ್ಳಿ !" ಎಂದು ನಿಂದಿಸುತ್ತಿದ್ದರು.

ಪ್ರತಿ ವರ್ಷ ಸಂಕ್ರಾಂತಿಯ ದಿನ ಆ ಮಿತ್ರರಿಬ್ಬರೂ ತಮಗೆ ಬಂದ ಲಾಭವನ್ನು ಹಂಚಿಕೊಳ್ಳುತ್ತಿದ್ದರು. ಆ ಸಮಯದಲ್ಲಿ ಗಂಗಯ್ಯ ತನ್ನ ಭಾಗದ ಲಾಭದಿಂದ ಮುನ್ನೂರ ಅರುವತ್ತೈದು ರೂಪಾಯಿಗಳನ್ನು ತೆಗೆದು ಬೇರೆಯಾಗಿ ಮೂಟೆ ಕಟ್ಟಿಕೊಳ್ಳುತ್ತಿದ್ದನು. ದುರ್ಗಯ್ಯ ಅದನ್ನು ನೋಡುತ್ತಾ ಇದ್ದರೂ ಅದೇಕೆಂದು ಕೇಳಲೂ ಇಲ್ಲ, ಗಂಗಯ್ಯ ಹೇಳಲೂ ಇಲ್ಲ. ದುರ್ಗಯ್ಯ ಏನೂ ಕೇಳದಿರುವುದನ್ನು ನೋಡಿ ಗಂಗಯ್ಯನಿಗೇ ಆಶ್ಚರ್ಯ.

ಆ ಊರಿನ ಹೊರಗಿನ ಮೇರೆಯಲ್ಲಿ ಸಂತೆ ಸೇರುತ್ತಿದ್ದಿತು. ಅದರೊಂದಿಗೆ ಆಟಪಾಟಗಳ ಜಾತ್ರೆಯೂ ನಡೆಯುತ್ತಿದ್ದಿತು. ಜೂಜಾಟವೂ, ಕುಡಿತ ಕುಣಿತಗಳೂ ಧಾರಾಳವಾಗಿ ಸಾಗುತ್ತಿದ್ದುವು. ಸಂತೆಗೆ ತುಸು ದೂರದಲ್ಲಿ ಒಂದು ವಿಶಾಲವಾದ ದಿಬ್ಬವಿದ್ದಿತು. ಆ ದಿಬ್ಬದ ಮೇಲೆ ಒಂದು ಬಾವಿಯೂ, ಅದರ ಸುತ್ತಲೂ ಎತ್ತರವಾಗಿ, ದಟ್ಟವಾಗಿ ಬೆಳೆದ ಮರಗಳೂ ಇದ್ದುವು.

ಆ ಪ್ರದೇಶವು ಪ್ರಯಾಣಿಕರ ವಿಶ್ರಾಂತಿಗೂ, ಊಟತಿಂಡಿಗಳಿಗೂ ಬಹಳ ಸೌಕರ್ಯವಾಗಿತ್ತು. ಮೂನ್ನೂರರುವತ್ತೈದು ರೂಪಾಯಿಗಳನ್ನು ಪ್ರತ್ಯೇಕವಾಗಿ ಮೂಟೆ ಕಟ್ಟಿಕೊಂಡ ಗಂಗಯ್ಯ, ಯಾರಿಗೂ ಗೊತ್ತಾಗದ ಹಾಗೆ ಆ ಬಾವಿಯ ಬಳಿಯಲ್ಲಿ ಹಣದ ಮೂಟೆಯನ್ನಿಟ್ಟು ಹೋಗಿಬಿಡುವನು. ಅದನ್ನು ಯಾರು ಎತ್ತಿಕೊಂಡು ಹೋಗುವರೆಂಬ ಸಂಗತಿ ಅವನಿಗೆ ತಿಳಿಯದು. ತಿಳಿಯಬೇಕೆಂದು ಅವನಿಗೆ ತೋರಲೂ ಇಲ್ಲ.

ಆದರೆ ಒಂದು ವರ್ಷ ಅವನಿಗೆ ತನ್ನ ಗುಪ್ತದಾನವು ಯಾರಿಗೆ ಸೇರುವುದೋ ನೋಡಬೇಕೆಂಬ

ಎಂ. ಡಿ. ಸೌಜನ್ಯ

ಕೋರಿಕೆಯುಂಟಾಯಿತು. ಅಂತೆಯೇ ಅವನು ಬಾವಿಯ ಹತ್ತಿರ ಹಣದ ಮೂಟೆಯನ್ನಿಟ್ಟು ಹೊರಟುಹೋದಂತೆ ಹೋಗಿ, ಮತ್ತೆ ಹಿಂದಿರುಗಿ ಬಂದನು. ಆಗ ಯಾವನೋ ಒಬ್ಬ ಮನುಷ್ಯ ಹೆಗಲಲ್ಲಿದ್ದ ಶಾಲನ್ನು ತಲೆಯ ಮೇಲೆ ಎಳೆದು ಮುಚ್ಚಿಕೊಂಡು ಮರದ ಮರೆಯಿಂದಾಗಿ ಬಾವಿಯ ಕಡೆಯಿಂದ ಹೊರಟು ಹೋಗುತ್ತಿರುವುದನ್ನು ನೋಡಿದನು. ಗಂಗಯ್ಯ ಬಾವಿಯ ಹತ್ತಿರ ಇಟ್ಟ ಹಣದ ಮೂಟೆ ಅಲ್ಲಿರಲಿಲ್ಲ.

ಹಾಗಾದರೆ ಆ ಮನುಷ್ಯನೇ ತಾನಿಟ್ಟ ಹಣದ ಮೂಟೆಯನ್ನು ಎತ್ತಿಕೊಂಡು ಹೋಗುವನೆಂದು ತಿಳಿದು, ಗಂಗಯ್ಯ ಅವನನ್ನು ಅನುಸರಿಸಿದನು. ಆ ವ್ಯಕ್ತಿ ದುರ್ಗಯ್ಯನೇ ಎಂದು ಬೇಗದಲ್ಲೇ ಅವನಿಗೆ ತಿಳಿಯಿತು. ಅವನು ದುರ್ಗಯ್ಯನನ್ನು ಕರೆದು ನಿಲ್ಲಿಸಿ, "ಏನಪ್ಪಾ ಇದು? ನನ್ನ ಹಣ ಯಾವ ಬಡವನಿಗೋ ಸಿಕ್ಕಿ ಲಾಭಪಡೆಯುವನೆಂದುಕೊಂಡರೆ, ಅದು ನಿನಗೋ ಸಿಕ್ಕಿತು?" ಎಂದನು ಸಂಕಟದಿಂದ.

ದುರ್ಗಯ್ಯ ನಗುತ್ತ, "ನೀನು ಬೇಡವೆಂದು ಬಿಸಾಡಿದ ಹಣ. ಯಾರಿಗೆ ಸಿಕ್ಕಿದರೆ ನಿನಗೇನು ಕಷ್ಟವಪ್ಪಾ?" ಎಂದು ಕೇಳಿದನು.

"ಹಣವನ್ನು ನಾನು ಹಾಗೆ ಏತಕ್ಕೆ ಬಿಸಾಡಿದೆನೆಂದು ತಿಳಿದರೆ ನೀನು ಹೀಗೆ ಹೇಳಲಾರೆ" ಎಂದು ಗಂಗಯ್ಯ ತನ್ನ ಕಥೆಯನ್ನು ಹೇಳಿದ.

"ನನಗೆ ಚಿಕ್ಕತನದಲ್ಲಿಯೇ ತಂದೆ ತಾಯಿಗಳು ಹೋದರು. ತೀರಬಡತನ. ಹೊಟ್ಟೆ ತುಂಬಿಸಲಿಕ್ಕಾಗಿ ಅಂತಹ ಚಿಕ್ಕ ವಯಸ್ಸಿನಲ್ಲೇ ಏನೇನೋ ಕೆಲಸಗಳನ್ನು ಮಾಡಿಕೊಂಡಿದ್ದೆ. ಒಂದು ಸಾರಿ ಕೆಟ್ಟ ಬರಗಾಲ ಬಂದು, ನಮ್ಮೂರಿನ ಜನರೆಲ್ಲಾ ಎಲ್ಲೆಲ್ಲಿಗೋ ಓಡಿ ಹೋದರು. ನಾನು ಈ ಊರಿಗೆ ಬಂದೆ. ಇಲ್ಲಿ ದೊಡ್ಡ ಸಂತೆಯೂ ಜಾತ್ರೆಯೂ ನಡೆಯುತ್ತಿದ್ದಿತು. ಆ ದಿನ ಸಂಕ್ರಾಂತಿಯಾಗಿತ್ತು. ನನಗೆ ನಾಲ್ಕು ದಿನಗಳಿಂದ ಹೊಟ್ಟೆಗೇನೂ ಸಿಕ್ಕಿರಲಿಲ್ಲ. ಇನ್ನು ಬೇಡಿ ಪ್ರಯೋಜನವಿಲ್ಲವೆಂದುಕೊಂಡು ಮಿಠಾಯಿ ಅಂಗಡಿಯಿಂದ ಎರಡು ಲಡ್ಡುಗಳನ್ನು ಕದ್ದುಕೊಳ್ಳಲು





ಹೋಗಿ ಸಿಕ್ಕಿಬಿದ್ದೆ. ಮೂಳೆಮುರಿಯುವ ಹಾಗೆ ಪೆಟ್ಟುಬಿತ್ತು. ಹಸಿವಿನ ಬಾಧೆಯೂ ಅವಮಾನವೂ, ಅಸಹಾಯತೆಯೂ ಒಟ್ಟುಸೇರಿದುದರಿಂದ ಸಾಯ ಬೇಕೆಂದು ತೋರಿತು. ಈ ಬಾವಿಯೊಳಗೆ ಹಾರ ಬೇಕೆಂದು ನೋಡುವಾಗ ನನ್ನ ಕಾಲಿಗೆ ಏನೋ ತಗ ಲಿತು. ಕೆಂಪುಕಲ್ಲು ಕೂಡಿಸಿದ ಬಂಗಾರದ ಉಂಗುರ. ಅಷ್ಟೇ. ಅದನ್ನು ನೋಡಿ ನನಗೆ ಜೀವನದ ಮೇಲೆ ಮತ್ತೆ ಆಶೆ ಹುಟ್ಟಿತು. ಆ ಉಂಗುರವನ್ನು ಮಾರಿ ಒಂದು ಎಮ್ಮೆಯನ್ನು ಕೊಂಡುಕೊಂಡೆ. ಅದರಿಂದ ಬಂದ ಆದಾಯದಿಂದ ಎತ್ತಿನ ಗಾಡಿ ಕೊಂಡು ಕೊಂಡೆ. ಹಾಗಿರುವಾಗ ನೀನು ನನ್ನೊಂದಿಗೆ ಕೂಡಿದೆ. ಧಾನ್ಯದ ವ್ಯಾಪಾರದಲ್ಲಿ ಇಬ್ಬರೂ ಮೇಲೆ ಬಂದೆವು. ಯಾವ ದಿನ ನನಗೆ ಬಾವಿಯ ಹತ್ತಿರ ಉಂಗುರವು ದೊರಕಿತೋ ಅದೇ ಸಂಕ್ರಾಂತಿಯ ದಿನ ಆ ಬಾವಿಯ ಹತ್ತಿರ ಮುನ್ನೂರರುವತ್ತೈದು ರೂಪಾಯಿಗಳನ್ನು ಗುಪ್ತವಾಗಿ ಬಿಟ್ಟುಬರುತ್ತಿದ್ದೆ.

ಅವನ ಕತೆಯನ್ನು ಕೇಳಿ ದುರ್ಗಯ್ಯ, "ನಿನ್ನ ಅಭಿಪ್ರಾಯವೇನೋ ಒಳ್ಳೆಯದೇ ಇರಬಹುದು. ನಿನ್ನ ಹಣ ಎತ್ತಿಕೊಂಡವನ ಬುದ್ಧಿ ವಕ್ರಿಸುವ ಅಪಾಯವೂ ಇದರಲ್ಲಿದೆ. ಬೇಕಾದರೆ ಅದನ್ನು ಪ್ರತ್ಯಕ್ಷ ಪರೀಕ್ಷಿಸಿಯೇ ನೋಡಬಹುದು" ಎಂದನು. ಅವನು ಆ ಹಣದ ಮೂಟೆಯನ್ನು ದೊಡ್ಡ ಮೂಟೆ ಯೊಳಗಿಟ್ಟು, ಗಂಗಯ್ಯನೊಂದಿಗೆ ಬಾವಿಯ ಬಳಿಗೇ ಹಿಂದಿರುಗಿದನು. ಇಬ್ಬರೂ ಕೂಡಿ ಒಂದು ದೊಡ್ಡ ಮರದ ಮೇಲೇರಿಕೊಂಡರು.

ದುರ್ಗಯ್ಯ ತನ್ನ ದೊಡ್ಡ ಮೂಟೆಯೊಳಗಿನಿಂದ ಒಂದ ಸಣ್ಣ ಹಣದ ಚೀಲವನ್ನು ತೆಗೆದು ಬಾವಿಯ ಹತ್ತಿರ ಬೀಳುವಂತೆ ಒಗೆದನು.

ಸ್ವಲ್ಪ ಹೊತ್ತಿನ ಮೇಲೆ ಕುತ್ತಿಗೆಯಿಂದ ಕಾಲಿನ ವರೆಗೂ ಕಾಷಾಯ ವಸ್ತ್ರ ಧರಿಸಿಕೊಂಡಿದ್ದ ಬಿಳೀ ಗಡ್ಡದ ಸಾಧುವೊಬ್ಬನು, ತಾನು ಭಿಕ್ಷೆ ಬೇಡಿ ತಂದು ಕೊಂಡ ಅನ್ನದ ಗಂಟನ್ನು ಬಾವಿಯ ಬದಿಯಲ್ಲಿಟ್ಟು ಕಾಲು ತೊಳೆಯಲು ಬಾಲ್ದಿಯನ್ನೆತ್ತಿಕೊಂಡು ಬದಿಗೆ ತಿರುಗಿದನು. ಆಗ ದುರ್ಗಯ್ಯ ಒಗೆದ ಹಣದ ಗಂಟು ಅವನ ಕಣ್ಣಿಗೆ ಬಿತ್ತು.

ಕೂಡಲೇ ಅವನಲ್ಲಿ ವಿಚಿತ್ರವಾದ ಬದಲಾವಣೆ ಬಂದಿತು. ಆಗ ಅವನು ಬಾಯಿಯಿಂದ ಹೊರಡಿಸಿ ಕೊಂಡಿದ್ದ ಭಕ್ತಿಗೀತವನ್ನು ನಿಲ್ಲಿಸಿ, ಸುತ್ತುಮುತ್ತಲೂ ನೋಡಿ ಯಾರೂ ಇಲ್ಲವೆಂಬುದನ್ನು ದೃಢಪಡಿಸಿ ಕೊಂಡು, ಆ ಮೂಟೆಯನ್ನೆತ್ತಿ ತನ್ನ ಜೋಳಿಗೆ ಯೊಳಗೆ ಹಾಕಿಕೊಂಡು, "ಇಷ್ಟು ದಿನಗಳ ಮೇಲೆ ಈ ಹಾಳು ಬದುಕಿಗೊಂದು ವಿಮೋಚನೆ ಬಂತು. ಇನ್ನಾದರೂ ಮದುವೆಯಾಗಿ ಸುಖಪಡುತ್ತೇನೆ !" ಎಂದು ಹೊರಗೆ ಕೇಳಿಸುವಂತೆಯೇ ಸ್ವಗತ ಮಾತಾಡಿಕೊಳ್ಳುತ್ತ, ಬೇಗಬೇಗನೆ ಅಲ್ಲಿಂದ ಹೊರಟು ಹೋದನು. ಬೇಡಿ ತಂದ ಅನ್ನದ ಮುದ್ದೆಯ ಚಿಂತೆಯೂ ಅವನಿಗಿದ್ದಿಲ್ಲ. ಅವನ ಹಸಿವೆಯೋ

ಮಾಯವಾಗಿತ್ತು! ಆ ವಿಚಿತ್ರವನ್ನು ನೋಡಿ, "ಎಲ್ಲಾ ಬಂಧಗಳನ್ನೂ ಬಿಟ್ಟ ಸನ್ಯಾಸಿಗೆ ಈ ವಯಸ್ಸಿನಲ್ಲಿ ಮದುವೆಯೇ!" ಎಂದು ಗಂಗಯ್ಯನಿಗೆ ಆಶ್ಚರ್ಯವಾಯಿತು. ಮಾತಾಡಬೇಡವೆಂದು ದುರ್ಗಯ್ಯ ಸನ್ನೆಮಾಡಿದ. ಆಮೇಲೆ ಅವನು ಒಂದು ಬೆಳ್ಳಿಯ ರೂಪಾಯಿ ತೆಗೆದು ಬಾವಿಯ ಹತ್ತಿರ ಬೀಳುವಂತೆ ಬೀಸಿ ಒಗೆದ.

ಸ್ವಲ್ಪಹೊತ್ತಿನಲ್ಲಿ ಇಬ್ಬರು ಜೂಜುಗಾರರು ಯಾರನ್ನೋ ಗಟ್ಟಿಯಾಗಿ ಬೈದುಕೊಳ್ಳುತ್ತಾ ಆ ಬಾವಿಯ ಬಳಿಗೆ ಬಂದರು.

"ಛೆ! ಒಂದು ಒಳ್ಳೆಯ ಎಮ್ಮೆ ಕೊಂಡುಕೊಳ್ಳುವಾ ಅಂತ ತೆಗೆದುಕೊಂಡು ಬಂದ ಹಣವನ್ನೆಲ್ಲಾ ಜೂಜಿನಲ್ಲಿ ಹಾಳು ಮಾಡಿಬಿಟ್ಟೆ. ಕಾಲಾಣೆ ಉಳಿಯಲಿಲ್ಲ. ಮನೆಗೆ ಯಾವ ಮುಖದಲ್ಲಿ ಹೋಗಲಿ? ಆದಕ್ಕಿಂತ ಈ ಬಾವಿಗೆ ಹಾರಿ ಸಾಯುವುದೇ ಒಳ್ಳೆಯದು!" ಎಂದುಕೊಂಡು ಒಬ್ಬನು ಬಾವಿಯ ಬಳಿಗೆ ದಡದಡ ಹೋದನು. ಎರಡನೇಯವನು ಅವನನ್ನು ತಡೆಯುವ ಪ್ರಯತ್ನದಲ್ಲಿರುವಾಗ, ಮೊದಲನೇಯವನಿಗೆ ರೂಪಾಯಿ ನೆಲದಲ್ಲಿರುವುದು ಕಂಡಿತು. ಅವನು ತಟ್ಟನೆ ಆ ರೂಪಾಯಿಯನ್ನು ಎತ್ತಿಕೊಂಡು, "ಸಮಯಕ್ಕೆ ಸಿಕ್ಕಿತು! ಈ ರೂಪಾಯಿಯಿಂದ ಹೋದ ಹಣವೆಲ್ಲಾ ತಿರುಗಿಬರುವುದೋ ನೋಡಿಬಿಡುತ್ತೇನೆ. ಯಾರಿಗೆ ಗೊತ್ತು!" ಎನ್ನುತ್ತಾ ಅವನು ಮತ್ತೆ ಜೂಜಾಡಲು ಓಡಿದ.

"ಅದರಲ್ಲಿ ನನ್ನದೂ ಅರ್ಧ ಭಾಗವಿದೆಯಪ್ಪೋ!" ಎನ್ನುತ್ತಾ ಎರಡನೇಯವನು ಮೊದಲಿನವನ ಹಿಂದೆಯೇ ಓಡಿದನು.

ಅದನ್ನು ನೋಡಿ ಗಂಗಯ್ಯ ದುರ್ಗಯ್ಯನೊಂದಿಗೆ, "ಇದೇನಿದು! ಎಷ್ಟೋ ಹಣವನ್ನು ಜೂಜಿನಲ್ಲಿ ಕಳೆದುಕೊಂಡು ಅಳುತ್ತಿದ್ದವನು, ಒಂದು ರೂಪಾಯಿ ಸಿಕ್ಕಿದ ಕೂಡಲೇ ಮತ್ತೆ ಜೂಜಾಡಲು ಓಡುವನಲ್ಲಾ!" ಎಂದನು. ದುರ್ಗಯ್ಯ ಏನೂ ಮಾತಾಡಲಿಲ್ಲ.



ಸ್ವಲ್ಪ ಹೊತ್ತಿನ ಮೇಲೆ ತಲೆಯಲ್ಲಿ ಕಟ್ಟಿಗೆಯ ಹೊರೆ ಹೊತ್ತುಕೊಂಡ ಒಬ್ಬ ಕಷ್ಟಾಳು ಆ ಬಾವಿಯ ಬಳಿಗೆ ಬರುವುದು ಕಾಣಿಸಿತು. ಆಗ ದುರ್ಗಯ್ಯ ಒಂದು ಸಣ್ಣ ಹಣದ ಚೀಲ ತೆಗೆದು ಬಾವಿಗೂ ಆ ಕಟ್ಟಿಗೆಯ ಹೊರೆಯುವವನಿಗೂ ನಡುವೆ ಬೀಳುವಂತೆ ಬೀಸಿ ಒಗೆದನು.

ಕಟ್ಟಿಗೆಯವನು ಬೇಸರದಿಂದ ತನಗೆತಾನೇ "ಏನು ಬದುಕೋ! ಈ ಕಟ್ಟಿಗೆಯನ್ನು ಮಾರಿ ಮುಗಿಸುವುದು ಯಾವಾಗ? ಮನೆಗೆ ಹೋಗಿ ಗಂಜಿಬೇಸಿ ಕುಡಿಯುವುದು ಯಾವಾಗ? ಕರ್ಮ!" ಎಂದು ಹೇಳಿಕೊಳ್ಳುತ್ತಾ, ಕಟ್ಟಿಗೆಯ ಹೊರೆಯನ್ನು ಕೆಳಗಿಟ್ಟು, ಬಾಲ್ದಿಯಿಂದ ನೀರು ಸೇದಿ ಕುಡಿದು, ಮತ್ತೆ ಹೊರೆಯನ್ನೆತ್ತಿಕೊಂಡು ಸಂತೆಯ ಕಡೆಗೆ ಹೋದನು.

"ಇದೇನಿದು? ದಾರಿಯಲ್ಲಿ ಹಣದ ಚೀಲ ಇರುವುದನ್ನು ನೋಡದೆಯೇ ಹೋಗುತ್ತಾನಲ್ಲಾ!" ಎಂದ ಗಂಗಯ್ಯ.

"ಹೌದು ಹೌದು. ಗಂಗಯ್ಯಾ, ನಿನ ಗುಪ್ತ ದಾನವು ಅಪಾತ್ರರಿಗೆ ಸಿಕ್ಕಿದರೆ ಎಷ್ಟು ಕೆಡುಕಾಗುವುದೆಂದು ನೋಡಿದೆಯಷ್ಟೆ? ಶ್ರಮಪಡದೆ ಸುಮ್ಮನೆ ದೊರಕುವ ಹಣದ ಬೆಲೆಯನ್ನು ತಿಳಿಯುವವರು ತುಂಬಾ ಕಡಿಮೆ. ಪ್ರಾಯ ಹಿಂದಿರುಗಿದ ಆ ಮುದಿ ಸಾಧುವಿಗೆ ಹಣದ ಗಂಟು ನೋಡಿದ ಕೂಡಲೇ ಬುದ್ಧಿ ವಕ್ರಿಸಿಹೋಯಿತು. ಆ ಗಂಟಿನಲ್ಲಿರುವುದು ಹಂಚಿನ ತುಂಡುಗಳೆಂಬುದನ್ನು ನೋಡಿಕೊಳ್ಳದೆಯೇ, ತನ್ನ ಜೋಳಿಗೆಗೆ ಹಾಕಿಕೊಂಡು ಹಸಿವೆ ಕೂಡಾ ಮರೆತು ಸುಖದ ಮೇಲಿನ ದೃಷ್ಟಿಯಿಂದ ಹೋಗಿಬಿಟ್ಟ. ಹಾಗೆಯೇ ಒಂದು ರೂಪಾಯಿ ನೋಡಿದ ಕೂಡಲೇ ಜೂಜುಗಾರನಿಗೆ ಇದ್ದ ಜ್ಞಾನವೂ ಹೊರಟುಹೋಯಿತು. ನಿಜವಾಗಿ ಹಣದಿಂದ ಒಳ್ಳೆಯ ಸ್ಥಿತಿಗೆ ಬರುವವನಿಗೆ ಅಡ್ಡದಾರಿಯಿಂದ ಹಣ ಸಂಪಾದಿಸುವ ದೃಷ್ಟಿಯೇ ಇಲ್ಲ. ಆ ಕಟ್ಟಿಗೆಯವನು ಅಂಥವನು. ಅವನದು ಶ್ರಮಫಲಿತದ ಮೇಲೆಯೇ ದೃಷ್ಟಿ. ಅಂತೆಯೇ ಕಾಲಬದಿಯಲ್ಲಿದ್ದ ಹಣದ ಚೀಲ ಅವನಿಗೆ ಕಾಣಲಿಲ್ಲ!" ಎಂದ ದುರ್ಗಯ್ಯ.

"ಹಾಗಾದರೆ ನಾನು ಇಷ್ಟುಕಾಲ ಮಾಡಿದ ಗುಪ್ತ ದಾನವು ಬೂದಿಯಲ್ಲಿ ಸುರಿದ ಪನ್ನೀರೇ ಅನ್ನು!" ಎಂದ ಗಂಗಯ್ಯ ಏನೋ ಪಶ್ಚಾತ್ತಾಪದಿಂದ.

"ಹಾಗಾಗಲಿಲ್ಲ. ಅದನೆಲ್ಲಾ ನಾನು ತಂದು ಭದ್ರವಾಗಿಟ್ಟಿದ್ದೇನೆ. ಆ ಹಣದಿಂದ ಶಾಶ್ವತವಾಗಿರುವಂತೆ ನಮ್ಮ ಹೆಸರಿನಲ್ಲಿ ಒಂದು ಪಾಠಶಾಲೆ ಕಟ್ಟಿಸೋಣ" ಎಂದ ದುರ್ಗಯ್ಯ.

ಹೀಗೆ ಅವರ ಅನ್ಯೋನ್ಯತೆ ಇನ್ನಷ್ಟು ಬಲವಾಗಿ ಎಲ್ಲರಿಗೂ ಆದರ್ಶವೆನಿಸಿತು.





# ಕಳ್ಳರ ಗುಟ್ಟು

ಚಿನ್ನಪ್ಪನು ತನ್ನ ನಾಯಿಯೊಂದಿಗೆ ಪ್ರಯಾಣ ಮಾಡುತ್ತಾ ಒಮ್ಮೆ ಗಂಗಾಪುರವೆಂಬ ಊರನ್ನು ತಲುಪಿದನು. ಅವನು ಆ ಊರು ಮುಟ್ಟುವಾಗ ಕತ್ತಲೆಯಾಗಿ ಹೋಯಿತು. ಅವನಿಗೆ ತುಂಬಾ ಹಸಿವೆಗಿಂತ ಹೆಚ್ಚಾಗಿ ದಾಹ. ಬೇಗನೇ ಸ್ವಲ್ಪ ನೀರು ಕುಡಿಯಬೇಕೆಂದು ನೋಡುತ್ತಿದ್ದನು.

ಆದರೆ ಊರಿನ ಸ್ಥಿತಿಯನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಇನ್ನೂ ಒಂದು ಜಾಮರಾತ್ರಿ ಕೂಡಾ ಕಳೆಯದಿರುವಾಗ, ಆಗಲೇ ಎಲ್ಲಾ ಬೀದಿಗಳೂ ನಿರ್ಜನವಾಗಿದ್ದುವು. ಅನೇಕ ಮನೆಗಳು ಕಾಣುತ್ತಿದ್ದರೂ ಎಲ್ಲಾ ಮನೆಯ ಬಾಗಿಲುಗಳೂ ಮುಚ್ಚಿಕೊಂಡಿದ್ದುವು. ಸ್ವಲ್ಪ ನೀರು ಕೇಳಿ ಕುಡಿಯೋಣವೆಂದು ಚಿನ್ನಪ್ಪನು ಮನೆಯ ಬಾಗಿಲನ್ನು ತಟ್ಟಿದರೆ ಒಳಗಿನಿಂದ ಸದ್ದೇ ಬರುತ್ತಿದ್ದಿಲ್ಲ. ಮೆಲ್ಲಗೆ ಒಳಗಿನಿಂದ ಮಾತು ಕೇಳುತ್ತಿದ್ದ ಮನೆಯವರು ಕೂಡಾ, ಬಾಗಿಲು ತಟ್ಟಿದ ಕೂಡಲೇ ಮಾತು ನಿಲ್ಲಿಸಿ ಸುಮ್ಮನಾಗಿಬಿಡುತ್ತಿದ್ದರು.

ಏಕೆ ಹೀಗೆಂದು ತಿಳಿಯದೆ ಚಿನ್ನಪ್ಪನು ಬಾಗಿಲು ತಟ್ಟುವುದನ್ನು ಬಿಟ್ಟು, ಒಂದು ಮನೆಯ ಬಾಗಿಲ ಸಂದಿನಿಂದ ಒಳಗೆ ಹಣಿಕಿ ನೋಡಿದನು. ಒಳಗೆ ಮಸಕು ಬೆಳಕಿನಲ್ಲಿ ಕುತ್ತಿಗೆಯ ವರೆಗೆ ಶಾಲು ಹೊದೆದುಕೊಂಡು ಎದುರು ಬದಿರಾಗಿ ಕುಳಿತುಕೊಂಡು ಇಬ್ಬರು ಮನುಷ್ಯರು ಯಾವುದಕ್ಕೋ ಭಯ ಪಡುತ್ತ ಏನೋ ಮೆಲ್ಲನೆ ಮಾತಾಡಿಕೊಳ್ಳುತ್ತಿದ್ದರು.

"ಅಯ್ಯಾ, ತುಂಬಾ ಬಾಯಾರಿಕೆ! ಕುಡಿಯಲು ಸ್ವಲ್ಪ ನೀರು ಬೇಕಿತ್ತು" ಎಂದು ಚಿನ್ನಪ್ಪ ದೈನ್ಯತೆಯಿಂದ ಕೇಳಿದ. ಆ ಕೂಡಲೇ ಒಳಗಿನವರು ದೀಪವನ್ನು ಊದಿ ನಂದಿಸಿ ಗಬಕ್ಕನೆ ಮಲಗಿ ಮುಸುಕು ಹಾಕಿಕೊಂಡರು. ಅದನ್ನು ತಿಳಿದು ಅಷ್ಟೊಂದು ಸಂಕಟದಲ್ಲಿಯೂ ಚಿನ್ನಪ್ಪನಿಗೆ ನಗು ಬಂದಿತು.

ಕತ್ತಲಾದ ಕೂಡಲೇ ಎಲ್ಲರೂ ಬಾಗಿಲು ಹಾಕಿ ಹೆದರಿ ಮುದುಡಿಕೊಂಡಿದ್ದರೆಂದರೆ ಏಕಿದ್ದೀತು? ಇವರಿಗೆಲ್ಲಾ ಏನೋ ಕೆಟ್ಟ ಭಯವೇ ಬಡೆದಿರಬೇಕು. ಅದೆಂಥ ಭಯವೋ ಎಂದು ಯೋಚಿಸುತ್ತಾ ಚಿನ್ನಪ್ಪನು ತನ್ನ ನಾಯಿಯೊಂದಿಗೆ ನಿರ್ಜನ ಬೀದಿಯಲ್ಲಿ ನಡೆಯುತ್ತಾ ಒಂದು ದೇವಾಲಯದ ಹತ್ತಿರ ಹೋದನು. ಅಲ್ಲಿಯ ಮಂಟಪದಲ್ಲಿ ಮೂವರು ಮನುಷ್ಯರು ಕುಳಿತುಕೊಂಡು, ಬಹಳ ಜೋರಾಗಿ

ಬಿ. ಎನ್. ರಾವ್



ಗಂಜಾ ದಮ್ಮು ಹೊಡೆದುಕೊಂಡಿದ್ದರು. ಕತ್ತಲೆಯಲ್ಲಿ ಅವರ ಹಾವಭಾವಗಳನ್ನು ಗಮನಿಸಿದ ಚಿನ್ನಪ್ಪನಿಗೆ ಇವರಿಗೆ ಮಾತ್ರ ಯಾವ ಭಯವೂ ಅಂಟಿಕೊಂಡಿಲ್ಲವೆಂದು ತೋರಿ ಆಶ್ಚರ್ಯವಾಯಿತು. ಅವರನ್ನು ನೋಡಿ ಚಿನ್ನಪ್ಪನ ನಾಯಿ ಏತಕ್ಕೋ ಗುರ್ರುಗುಟ್ಟಿತು.

ಒಬ್ಬನು ಗಾಂಜಾನಳಿಕೆಯನ್ನು ಕೆಳಗಿಟ್ಟು, ಏನನ್ನೋ ತನ್ನ ಪಕ್ಕಕ್ಕೆ ಎಳೆದುಕೊಂಡು ತಿನ್ನುತ್ತ ಸಾರಾಯಿ ಕುಡಿಯತೊಡಗಿದನು. ಉಳಿದಿಬ್ಬರೂ ಅದೇ ಕೆಲಸಕ್ಕೆ ತೊಡಗಿದರು.

ಆಗ ಚಿನ್ನಪ್ಪ ಅವರ ತೀರ ಸಮೀಪಕ್ಕೆ ಹೋದ. "ಯಾರೋ ನೀನು ?" ಎಂದು ಅವರಲ್ಲೊಬ್ಬ ಒರಟಾಗಿ ಕೇಳಿದ.

"ತುಂಬಾ ದಾಹ ! ಮಾತಾಡಲಾರೆ. ಮೊದಲು ಸ್ವಲ್ಪ ನೀರು ಕೊಡಿ. ಗಂಟಲು ಪಸೆಮಾಡಿಕೊಂಡು ಎಲ್ಲಾ ಹೇಳುತ್ತೇನೆ" ಎಂದ ಚಿನ್ನಪ್ಪ.

"ಲೋ, ನೀರು ಅಂದರೆ ಏನೂಂತ ನಮಗ್ಗೊತ್ತಿಲ್ಲ. ಕುಡಿಯೋದು ಅಂದರೆ ಈ ಸಾರಾಯಿಯೇ. ದಾಹದಲ್ಲಿರುವವನಿಗೆ ಕುಡಿಯಲಿಕ್ಕೆ ಕೊಡಬೇಕಾದುದು ಧರ್ಮ. ಇಕೋ ಈ ಸೀಸಾ ತೆಗೆದುಕೊಂಡು ಕುಡಿದು ಗಂಟಲು ಒದ್ದೆಮಾಡಿಕೊಂಡುಬಿಡು ಬೇಕಾದರೆ. ಬೇಡದಿದ್ದರೆ ಯಾವ ಹಟ್ಟಿಗೋ ಹೋಗಿ ಕಲಗಚ್ಚು ಕುಡಿ." ಎಂದು ಮತ್ತೊಬ್ಬ ಸೀಸಾವನ್ನು ಎತ್ತಿ ಈಚೆಗಿಟ್ಟ.

ಚಿನ್ನಪ್ಪ ಏನೂ ಉತ್ತರ ಕೊಡದೆ ಅಲ್ಲಿಂದ ಹೊರಟು ದೂರ ಹೋದನು. ಅವನನ್ನು ನೋಡಿ ಅವರೆಲ್ಲ ಗಹಗಹಿಸಿ ನಕ್ಕರು. ನಗುವಿನಿಂದಲೇ ಅವನನ್ನು ಝಾಡಿಸಿಬಿಟ್ಟಂತೆ. ಅವನ ಪುಣ್ಯದಿಂದ ಕೆರೆಯೊಂದು ಹತ್ತಿತು. ಅಲ್ಲಿ ಇಷ್ಟು ನೀರು ಕುಡಿದು ಒಂದು ಮರದ ಬುಡದಲ್ಲಿ ಮಲಗಿ ಹೇಗೋ ಬೆಳಗು ಮಾಡಿದನು ಚಿನ್ನಪ್ಪ.

ಬೆಳಗಾದ ಮೇಲೆ ಚಿನ್ನಪ್ಪ ನಿದ್ದೆಯಿಂದೇಳುವಾಗ ಊರೆಲ್ಲಾ ತುಂಬಾ ಶಬ್ದಮಯವಾಗಿತ್ತು. ತುಂಬಾ ಜನರು ಸ್ನಾನದಿಂದ ಪರಿಶುದ್ಧರಾಗಿ ಅತ್ಯಂತ ಉತ್ಸಾಹದಿಂದ ಗುಂಪುಗುಂಪಾಗಿ ಎಲ್ಲಿಗೋ ಹೋಗುತ್ತಿದ್ದರು. ಚಿನ್ನಪ್ಪನು ಅವರಲ್ಲೊಬ್ಬನೊಂದಿಗೆ ವಿಚಾರಿಸಿ ಸಮಾಚಾರವೇನೆಂದು ತಿಳಿದುಕೊಂಡನು.

ಆ ದಿನ ಶುಕ್ರವಾರವಾದುದರಿಂದ ಜನರಿಗೆ ಸ್ವಾಮೀಜಿಯ ದರ್ಶನ ಭಾಗ್ಯ ಲಭಿಸುತ್ತದಂತೆ. ಆ ಸ್ವಾಮೀಜೀ ನಾಲ್ಕು ವಾರಗಳ ಕೆಳಗೆ ತಮ್ಮ ಶಿಷ್ಯರೊಂದಿಗೆ ಆ ಊರಿಗೆ ಬಂದವನು. ಆತ ಸಾಧಾರಣ ಸ್ವಾಮೀಜೀಯಲ್ಲ. ಯೋಗ ಸಾಧನೆ ಮಾಡಿದ ಮಹಾ ಯೋಗಿ. ಅವನ ಯೋಗಶಕ್ತಿ ಎಷ್ಟರಮಟ್ಟಿನದೆಂದರೆ, ಸಪ್ತಲೋಕಗಳಲ್ಲಿ ಸಂಚರಿಸಬಲ್ಲನು. ತ್ರಿಕಾಲಗಳನ್ನೂ ತಿಳಿದು ಹೇಳಬಲ್ಲನು. ಅವನು ಹೇಳಿದುದೆಲ್ಲವೂ ವೇದವಾಕ್ಯಗಳೇ. ಅವನು ಊರ ಹೊರಗೆ ಆಲದ ಮರದ ಕೆಳಗೆ ಪೀಠಸ್ಥನಾಗಿ ಮಂಡಿ

ಸಿರುತ್ತಾನೆ. ಶುಕ್ರವಾರದಹೊರತು ಉಳಿದ ದಿನಗಳಲ್ಲಿ ಯೋಗ ಸಮಾಧಿಯಲ್ಲಿರುತ್ತಾನೆ. ಶುಕ್ರವಾರದ ದಿನ ಜನರು ಆತನ ಪಾದಧೂಳಿ ತೆಗೆದುಕೊಂಡು, ತಮ್ಮ ಕೋರಿಕೆಗಳನ್ನು ಹೇಳಿಕೊಳ್ಳುತ್ತಾರೆ. ಆ ಕೋರಿಕೆಗಳಿಗೆ ಅವನು ಕೂಡಲೇ ಉತ್ತರಿಸುವುದಿಲ್ಲ; ಕಣ್ಣು ಮುಚ್ಚಿ ದೇವತೆಗಳೊಂದಿಗೆ ಸಂಭಾಷಣೆ ನಡೆಸಿ, ಅವರು ಹೇಳಿದ ಉತ್ತರವನ್ನು ಹೇಳುತ್ತಾನೆ. ಎಲ್ಲಾ ದೇವತೆಗಳೂ ಅವನು ಕರೆದ ಬಾಯಿಗೆ ಬರುವವರೇ.

ಚಿನ್ನಪ್ಪನಿಗೆ ಮಾತ್ರ ಇದನ್ನು ನಂಬಲು ಶಕ್ಯವಾಗಲಿಲ್ಲ. "ಇದೇನೋ ಸರಿ. ಆದರೆ ಈ ಊರಿನವರು ರಾತ್ರಿಯಾದ ಕೂಡಲೇ ಬಾಗಿಲು ಹಾಕಿಕೊಂಡು ಮಾತಾಡಲೂ ಹೆದರಿ ಮುದುಡಿಕೊಳ್ಳುತ್ತಾರೇಕೆ?" ಎಂದು ಚಿನ್ನಪ್ಪ ಕೇಳಿದನು. ಅದಕ್ಕೆ ಬಂದ ಉತ್ತರ ಇನ್ನೂ ಅದ್ಭುತವಾಗಿತ್ತು.

ಊರೊಳಗೆ ಕಳ್ಳರ ಕಾಟ ವಿಪರೀತವಾಗಿದೆ. ಆ ಕಳ್ಳರು ರಾಕ್ಷಸರಷ್ಟು ಕ್ರೂರರು. ಪ್ರಾಣ ತೆಗೆಯುವುದೆಂದರೆ ಅವರಿಗೊಂದು ಆಟ. ಸ್ವಾಮೀಜೀಯಿಂದ ಕೂಡಾ ಆ ಕಳ್ಳರನ್ನು ಪ್ರತಿಘಟಿಸಲು ಸಾಧ್ಯವಿಲ್ಲವಂತೆ. ಏಕೆಂದರೆ ಆ ಕಳ್ಳರು ರಾವಣನ ಜಾತಿಯವರಂತೆ. ಅವರೊಂದಿಗೆ ವಿರೋಧಿಸುವುದೂ ಸಮ, ಯಮದೂತರೊಂದಿಗೆ ವಿರೋಧಿಸುವುದೂ ಸಮವೇ! ಇದು ದೇವತೆಗಳು ಸ್ವಾಮೀಜೀಯೊಂದಿಗೆ ಹೇಳಿದ ಮಾತು. ಆದರೂ ಸ್ವಾಮೀಜೀ ಸುಮ್ಮನಿಲ್ಲ. ಈ ಕಳ್ಳರನ್ನು ನಿವಾರಿಸಬೇಕೆಂದು ದಿನಾ ದೇವರೊಂದಿಗೆ ಘರ್ಷಣೆ ಮಾಡುತ್ತಲೇ ಇದ್ದಾನಂತೆ.

ಇಷ್ಟು ಮಹತ್ವವಿರುವ ಆ ಸ್ವಾಮೀಜೀಯನ್ನು ನೋಡೋಣವೆಂದು ಚಿನ್ನಪ್ಪನು ಅಲ್ಲಿಗೆ ಹೋದನು. ಸ್ವಾಮೀಜೀ ಯೋಗಸಮಾಧಿಯಲ್ಲಿದ್ದನು. ಕೈಯಲ್ಲಿ ರುದ್ರಾಕ್ಷಿ ಮಾಲೆ, ಪಕ್ಕದಲ್ಲಿ ಕಮಂಡಲು, ಯೋಗದಂಡ. ಅವನೊಂದಿಗೆ ಬಲಿಷ್ಠರಾದ ಶಿಷ್ಯರೂ



ಇದ್ದರು. ಎಲ್ಲರೂ ಕಾಷಾಯ ವಸ್ತ್ರ ಧರಿಸಿದ್ದರು. ಎಲ್ಲರಿಗೂ ಮೊಳದುದ್ದ ಗಡ್ಡ ಮೀಸೆಗಳಿದ್ದುವು.

ಜನರು ಒಬ್ಬೊಬ್ಬರಾಗಿ ಸ್ವಾಮೀಜಿಯ ಬಳಿಗೆ ಹೋಗಿ ಏನೋ ಕೇಳುತ್ತಿದ್ದರು. ಸ್ವಾಮೀಜೀ ಕಿರುನಗುವಿನಿಂದ ಕೇಳಿ, ಕಣ್ಣು ಮುಚ್ಚಿ ಮತ್ತೆ ತೆರೆದು ಏನೋ ಸಮಾಧಾನ ಹೇಳಿ ವಿಭೂತಿ ಕೊಟ್ಟು ಕಳುಹಿಸುತ್ತಿದ್ದನು.

ಚಿನ್ನಪ್ಪನೂ ತನ್ನ ನಾಯಿಯೊಂದಿಗೆ ಅವನನ್ನು ಸಮೀಪಿಸಿ ದಂಡಪ್ರಣಾಮ ಮಾಡಿದನು. ಅವನ ನಾಯಿ ಸ್ವಾಮೀಜಿಯ ಶಿಷ್ಯರನ್ನು ನೋಡಿ ಗುರ್ರೆಂದಿತು. ಕೂಡಲೇ ಆ ಶಿಷ್ಯರು ಕಣ್ಣು ಮುಚ್ಚಿ ಏನೋ ಮಂತ್ರವನ್ನು ಜಪಿಸಿದರು. ಸ್ವಾಮೀಜೀ ಕಣ್ಣು ತೆರೆದು ಚಿನ್ನಪ್ಪನನ್ನು ತೀವ್ರವಾಗಿ ನೋಡಿದನು.

"ಸ್ವಾಮಿಗಳು ಕ್ಷಮಿಸಬೇಕು. ನಾಯಿಗೇನೂ ತಿಳಿಯದು." ಎಂದು ಚಿನ್ನಪ್ಪ ವಿನಯದಿಂದ ಹೇಳಿ ಗಲ್ಲ ಬಡಿದುಕೊಂಡನು. ಆಗ ಸಾಮೀಜೀ ಪ್ರಸನ್ನತೆ



ಯಿಂದ, "ನಿನಗೇನು ಬೇಕಪ್ಪಾ?" ಎಂದು ಕೇಳಿದನು. ಚಿನ್ನಪ್ಪ ನಾಚಿಕೊಳ್ಳುತ್ತ, "ನನಗೆ ಮದುವೆಯಾಗಬೇಕೆಂದಿದೆ ಸ್ವಾಮಿ. ಯಾವಾಗ ಆಗುತ್ತದೊ?" ಎಂದ.

ಶಿಷ್ಯರು ತಮ್ಮ ಗುರುವಿಗೆ ಏನೋ ಸನ್ನೆ ಮಾಡಿದರು. ಅದನ್ನು ನೋಡಿ ಸ್ವಾಮೀಜೀ ಮುಗುಳುನಕ್ಕು, "ಬಹಳ ಸಣ್ಣ ಕೋರಿಕೆ. ಪರವಾಯಿಲ್ಲ. ನಿನಗೆ ನಾನೇ ತಕ್ಕ ಹುಡುಗಿಯೊಂದಿಗೆ ಮದುವೆ ಮಾಡಿಸುತ್ತೇನೆ. ಈಗ ಹೋಗು, ಎರಡು ದಿನಗಳ ಮೇಲೆ ಬಾ." ಎಂದನು.

ಹೀಗೆ ಸ್ವಾಮೀಜೀ ಹತ್ತಿರ ಕೇಳುವವರೆಲ್ಲ ಪೂರ್ತಿಯಾದಮೇಲೆ, ಸ್ವಾಮೀಜೀ ಎದ್ದು ನಿಂತು ಎಲ್ಲರನ್ನೂ ನೋಡಿ ಹೀಗೆಂದನು:

"ಊರೊಳಗೆ ಬರುವ ಕಳ್ಳರ ಕಾಟವನ್ನು ಕುರಿತು ದೇವರೊಂದಿಗೆ ನಾನು ನಡೆಸಿದ ಚರ್ಚೆ ಪೂರ್ತಿಯಾಯಿತು. ದೇವತೆಗಳು ಈ ಊರನ್ನು ಕಳ್ಳರಿಂದ ಕಾಪಾಡಲು ಒಪ್ಪಿಕೊಂಡಿದ್ದಾರೆ. ಆದರೆ ಬರುವ ಶುಕ್ರವಾರದ ವರೆಗೂ ಕಳ್ಳರ ಕಾಟವನ್ನು ಸಹಿಸದೆ ಉಪಾಯವಿಲ್ಲ. ಆ ಮೇಲೆ ಕಳ್ಳರ ನೆರಳು ಸಹಾ ಈ ಊರಿಗೆ ಹಾಯದು. ಎಲ್ಲರಿಗೂ ಒಳ್ಳೆಯ ದಿನಗಳು ಬರಲಿವೆ. ಇದು ದೇವತೆಗಳ ಅಭಯಾನುಗ್ರಹ."

ಅನಂತರ ಎಲ್ಲರೂ ಸ್ವಾಮೀಜಿಯ ಗುಣಗಣಗಳನ್ನು ಹೇಳಿಕೊಳ್ಳುತ್ತಾ ತಂತಮ್ಮ ಮನೆಗಳಿಗೆ ಹೊರಟು ಹೋದರು. ಸ್ವಾಮೀಜೀ ಕಪಟನಾಟಕ ಸೂತ್ರಧಾರನೆಂದು ಚಿನ್ನಪ್ಪನಿಗೆ ಗೊತ್ತಾಯಿತು.

ಆ ದಿನ ರಾತ್ರಿ ಸ್ವಾಮೀಜೀ ಕುಳಿತಿರುವ ಆಲದ ಮರಕ್ಕೆ ತುಸುದೂರದಲ್ಲಿ ಚಿನ್ನಪ್ಪನು ತನ್ನ ನಾಯಿಯೊಂದಿಗೆ ಅಡಗಿ ಕುಳಿತನು. ನಡುರಾತ್ರಿಯಾದ ಮೇಲೆ ಮೂವರು ದೃಢಕಾಯದ ಮನುಷ್ಯರು ದೊಡ್ಡ ದೊಡ್ಡ ಗಂಟುಗಳನ್ನು ಹೊತ್ತುಕೊಂಡು ಸ್ವಾಮೀಜಿಯ ಬಳಿಗೆ ಬರುವುದನ್ನು ಚಿನ್ನಪ್ಪ ನೋಡಿದ.

ಅವನು ಅತ್ಯಂತ ಕುತೂಹಲದಿಂದ ಬೆಕ್ಕಿನಂತೆ ಕದಲುತ್ತಾ ಆಲದ ಮರದ ಹತ್ತಿರಕ್ಕೇ ಹೋದ. ಆ ಮೂಟೆಗಳನ್ನು ತಂದವರು ಮುಂಚಿನ ರಾತ್ರಿ ದೇವಾಲಯದ ಮಂಟಪದಲ್ಲಿದ್ದವರೇ! ಸ್ವಾಮೀಜಿಯ ಶಿಷ್ಯರಾಗಿದ್ದವರೂ ಅವರೇ.

ಅವರನ್ನು ನೋಡಿದ ಕೂಡಲೇ ಸ್ವಾಮೀಜೀ ಕುಳಿತಲ್ಲಿಂದೆದ್ದು, ಪೀಠದ ಮೇಲಿನ ಮುಚ್ಚಳವನ್ನು ತೆರೆದನು. ಅವರು ತಂದ ಬೆಳ್ಳಿ ಬಂಗಾರ, ಧನಗಳನ್ನು ಪೀಠದ ಬಾಯಿಯೊಳಗೆ ಸುರಿದು, ಮತ್ತೆ ಮುಚ್ಚಿಬಿಟ್ಟರು. ತರುವಾಯ ಅವರೆಲ್ಲಾ ಏನೇನೋ ತಿನ್ನುತ್ತಾ ಕುಡಿಯುತ್ತಾ ಹರಟೆ ಹೊಡೆದುಕೊಳ್ಳತೊಡಗಿದರು.

ಇದನ್ನೆಲ್ಲಾ ನೋಡುತ್ತಿದ್ದ ಚಿನ್ನಪ್ಪನ ರಕ್ತ ಕುದಿಯಿತು. ಆದರೆ ತಾನು ಅವಸರ ಪಟ್ಟರೆ, ಸ್ವಾಮೀಜೀ ಹೇಳಿದಂತೆ ತನ್ನ ಮದುವೆ ಅವನೇ ಮಾಡಿಬಿಟ್ಟಾನು!

ಅಂತೆಯೇ ಅವನು ಮೆಲ್ಲನೆ ಅಲ್ಲಿಂದ ಜಾರಿಕೊಂಡು, ಮುಂದೇನು ಮಾಡಬೇಕೆಂದು ತೀವ್ರವಾಗಿ ಆಲೋಚನೆ ಮಾಡಿದನು. ಸ್ವಾಮೀಜೀಯೇ ಕಳ್ಳರ ಗುರು ಎಂದು ಹೇಳಿದರೆ ಊರಿನವರು ನಂಬಲಾರರು. ಅದರ ಮೇಲೆ ತನ್ನನ್ನೇ ಸಾಯುವಹಾಗೆ ಹೊಡೆದಾರು ಕೂಡಾ. ಆದುದರಿಂದ ಪ್ರಜೆಗಳ ಮೂಢನಂಬುಗೆಗೆ ತಕ್ಕಹಾಗಿಯೇ ನಾಟಕವಾಡಬೇಕು.

ಬೆಳಗಾದ ಮೇಲೆ ಚಿನ್ನಪ್ಪ ಊರೊಳಗಿನ ಪ್ರತಿ ಮನೆಗೂ ಹೋಗಿ, "ಈ ದಿನ ಸ್ವಾಮೀಜೀಯನ್ನು ನೋಡಲು ಹಿಮಾಲಯದ ಕಡೆಯಿಂದ ಎಷ್ಟೋ ಮಂದಿ ಯೋಗೀಶ್ವರರು ಬರುತ್ತಾರಂತೆ. ಅವರಿಗಾಗಿ ಚಪ್ಪರವನ್ನೂ, ಮಂಟಪಗಳನ್ನೂ ಕಟ್ಟಿಸಬೇಕೆಂದು ಸ್ವಾಮೀಜಿಯ ಆಜ್ಞೆಯಾಗಿದೆ. ನೀವೆಲ್ಲಾ ಬುಟ್ಟಿ ತಟ್ಟೆ ಹಾರೆ ಗುದ್ದಲಿ ಗಢಾರೆಗಳೊಂದಿಗೆ ಆಲದ ಮರದ ಕಡೆಗೆ ಹೊರಡಿರಿ. ತಡಮಾಡಿದರೆ ಸ್ವಾಮೀಜೀಗೆ ಸಿಟ್ಟು ಬಂದೀತು !" ಎಂದು ಹೇಳಿದನು.

ಅದರಂತೆ ಊರವರೆಲ್ಲಾ ಉತ್ಸಾಹದಿಂದ ಹೊರಟರು. ಕತ್ತಿ ಕೋಲು ಹಾರೆ ಮೊದಲಾದುವುಗಳೊಂದಿಗೆ ಊರವರೆಲ್ಲಾ ಹುರುಪು ಗಟ್ಟಿ ತನ್ನ ಕಡೆಗೆ ಬರುವುದನ್ನು ನೋಡಿ, ಸ್ವಾಮೀಜೀಯೂ ಅವನ ಶಿಷ್ಯರೂ ಹೆದರಿದರು. ಎಲ್ಲರನ್ನೂ ಕರೆದುಕೊಂಡು ಚಿನ್ನಪ್ಪನು ತನ್ನ ನಾಯಿಯೊಂದಿಗೆ ಬರುವುದನ್ನು ನೋಡಿ ಸ್ವಾಮೀಜಿಗೆ ನಡುಕ ಬಂದಿತು. ಅಷ್ಟರಲ್ಲಿ ಎಲ್ಲರೂ ಸ್ವಾಮೀಜಿಯ ಸುತ್ತಲೂ ನೆರೆದರು. ತಮ್ಮನ್ನು ನೋಡಿ ಸ್ವಾಮೀಜೀ ಹೆದರಿ ಓಡಲು ಪ್ರಯತ್ನಿಸುವುದನ್ನು ನೋಡಿ ಜನರಿಗೆ ಆಶ್ಚರ್ಯವಾಯಿತು.

ಆಗಲೇ ಚಿನ್ನಪ್ಪನು ಸ್ವಾಮೀಜಿಯ ಮುಂದೆ ನಿಂತು, "ಇನ್ನು ಓಡಲು ಸಾಧ್ಯವಿಲ್ಲ. ನಿಮ್ಮ ಸಂಗತಿ ಎಲ್ಲರಿಗೂ ಗೊತ್ತಾಯಿತು. ನಿಮ್ಮನ್ನು ಹೊಂಡದೊಳಗೆ ಹುಗಿಯಲಿಕ್ಕೇ ಹಾರೆ ಗುದ್ದಲಿಗಳನ್ನು ತಂದಿದ್ದಾರೆ" ಎಂದು ತಟಕ್ಕನೆ ಹಾರಿ ಸ್ವಾಮೀಜೀಯ ಗಡ್ಡವನ್ನು ಹಿಡಿದೆಳೆದನು. ಅದು ಅವನ ಕೈಗೇ ಕಿತ್ತು ಬಂದಿತು. ಆ ಮೇಲೆ ಅವನು ಸ್ವಾಮೀಜಿಯ ಶಿಷ್ಯರ ಗಡ್ಡಗಳನ್ನು ಕೂಡಾ ಕಿತ್ತು ಬಿಸುಟನು.

ಕಳ್ಳರ ಗುಟ್ಟು ಗೊತ್ತಾದ ಕೂಡಲೇ ಊರವರ ಕೋಪವು ಕಟ್ಟು ಮೀರಿ ಹೋಯಿತು. ಕಳ್ಳ ಸ್ವಾಮೀಜೀ ಹಣ್ಣು ಹಣ್ಣಾಗುವಷ್ಟು ಒದೆ ಬಿದ್ದಿತು. ಚಿನ್ನಪ್ಪನು ಅವರನ್ನೆಲ್ಲ ಬಂಧಿಸಿ, ರಾಜಭಟರ ವಶಕ್ಕೆ ಕಳುಹಿಸಿ, ಪೀಠದ ಅಡಿಯಲ್ಲಿರುವ ಊರವರ ಸೊತ್ತುಗಳನ್ನು, ಊರ ಹಿರಿಯರಿಗೆ ತೋರಿಸಿದನು. ಯಾರ ವಸ್ತು ಒಡವೆಗಳು ಅವರಿಗೆ ಸಿಗುವ ಏರ್ಪಾಡೂ ನಡೆದ ಮೇಲೆ, ಚಿನ್ನಪ್ಪನು ತನ್ನ ನಾಯಿಯೊಂದಿಗೆ ಗಂಗಾಪುರವನ್ನು ಬಿಟ್ಟು ಹೊರಟುಹೋದನು.





# ಮರೆವಿನ ಮಡದಿ

ಒಂದು ಊರಿನಲ್ಲಿ ಈಶ್ವರಯ್ಯನೆಂಬ ಗೃಹಸ್ಥನೊಬ್ಬನಿದ್ದ. ಅವನಿಗೆ ಮುಂಗೋಪವಿತ್ತು. ಅದಕ್ಕೆ ಸರಿಯಾಗಿ ಅವನ ಮಡದಿ ಮಂಗಮ್ಮನಿಗೆ ಬುದ್ಧಿಯಲ್ಲಿ ಮರೆವಿನ ಅಂಟು ದಪ್ಪವಾಗಿ ಹತ್ತಿಕೊಂಡಿತ್ತು. ಹೀಗಾದುದರಿಂದ ದಂಪತಿಗಳೊಳಗೆ ಯಾವಾಗಲೂ ಕೋಪತಾಪಗಳ ಗಲಭೆ ಏಳುತ್ತಿತ್ತು.

ಒಂದು ದಿನ ಬೆಳಿಗ್ಗೆ ಈಶ್ವರಯ್ಯ ಜಗಲಿಯಲ್ಲಿ ಕುಳಿತುಕೊಂಡು, ಏನೋ ನೆನಪು ಮಾಡಿಕೊಂಡು, "ಏನೇ" ಎಂದು ಗಟ್ಟಿಯಾಗಿ ಹೆಂಡತಿಯನ್ನು ಕರೆದನು. ಅಡಿಗೇ ಮನೆಯಲ್ಲಿ ಒಲೆಯಲ್ಲಿ ಹಾಲು ಕಾಯಿಸಲಿಕ್ಕಿಟ್ಟು, ಅದು ಉಕ್ಕುವುದನ್ನು ಕೂಡಾ ಗಮನಿಸದೆ, ನಿನ್ನೆ ಪಕ್ಕದ ಮನೆಯವಳು ಹೇಳಿದ ಮಾತುಗಳನ್ನೇ ಆಲೋಚಿಸಿಕೊಂಡಿದ್ದ ಮಂಗಮ್ಮನಿಗೆ, ಎರಡು ಮೂರು ಸಾರಿ ಗಂಡ ಕರೆದರೂ ಕೇಳಿಸಲಿಲ್ಲ.

ಈಶ್ವರಯ್ಯ ಕೋಪದಿಂದ ಧಡಧಡನೆ ಅಡಿಗೇ ಮನೆಗೆ ಹೊಕ್ಕು "ಎಲ್ಲಿ ತಲೆಯಿಟ್ಟುಕೊಂಡಿದ್ದೀಯೇ ! ದಿನಾ ನನ್ನ ಪ್ರಾಣ ಹಿಂಡ್ತಾ ಇದ್ದೀ! ಈಗ ನಾನು ಪಟ್ಟಣಕ್ಕೆ ಹೋಗುತ್ತೇನೆ. ಮಧ್ಯಾಹ್ನ ಊಟಕ್ಕೆ ಬರಲಾರೆ. ಕತ್ತಲಾದ ಮೇಲೆ ಹಿಂದಿರುಗಿ ಬರುತ್ತೇನೆ, ಕೇಳಿತಾ ?" ಎಂದು ಒದರಿ ಹೇಳಿದನು. "ಹಾಂ, ಕೇಳಿತೂ ! ಯಾಕೆ ಹಾಗೆ ಕೂಗ್ತೀರಿ ?" ಎಂದು ಮಂಗಮ್ಮ ತಲೆ ಆಡಿಸಿದಳು.

ಸ್ವಲ್ಪ ಹೊತ್ತಿನ ಮೇಲೆ ಅವಳು ಗಂಡನ ಬಳಿಗೆ ಹೋಗಿ, "ಮಧ್ಯಾಹ್ನ ಏನು ಪಲ್ಯಮಾಡ್ಲೀ ? ಬೆಂಡೇಕಾಯಿ ಮಾಡಲೋ ತೊಂಡೇಕಾಯಿ ಮಾಡಲೋ ?" ಎಂದು ಕೇಳಿದಳು.

"ನಿನ್ನ ಮಂಡೇಕಾಯಿ ಮಾಡು. ನಾನು ಪಟ್ಟಣಕ್ಕೆ ಹೋಗಿ ರಾತ್ರಿ ಬರುತ್ತೇನೆಂದು ಕೂಗಿದೆನಲ್ಲಾ ? ಯಾವ ಕಾಯನ್ನಾದರೂ ಮಾಡಿಡು" ಎಂದು ಭುಸುಗುಟ್ಟಿ ಮನೆಯಿಂದ ಹೊರಟು ಹೋದನು.

ಗಂಡ ಹೋದ ಮೇಲೆ ಮಂಗಮ್ಮ ತನಗೆ ಬೇಕಾದುದನ್ನೇನೋ ಬೇಯಿಸಿ ತಿಂದಳು. ಅನಂತರ ಸಾಯಂಕಾಲದ ವರೆಗೂ ನಿದ್ದೆ ಮಾಡಿದಳು. ತರುವಾಯ ನಾಲ್ಕು ಮನೆಗಳಾಚೆಗಿರುವ ಪಾರ್ವತಕ್ಕನ ಮನೆಗೆ ಹೋಗಿ ಮಾತಾಡಿಸಿದಳು. ಇಬ್ಬರೂ ಕತ್ತಲೆಯಾಗುವ ವರೆಗೂ ಏನೇನೋ ಪಟ್ಟಾಂಗ ಹೊಡೆಯುತ್ತಾ ಕುಳಿತರು. "ಅಂದ ಹಾಗೆ ಮಂಗಮ್ಮಾ, ನಿನ್ನ ಯಜಮಾನ್ರು ಪಟ್ಟಣಕ್ಕೆ ಹೋಗಿದ್ದಾರೆಂದೆ

ಎಂ. ಕೆ. ಈಶ್ವರರಾವ್

ಯಲ್ಲಾ? ರಾತ್ರಿ ನಮ್ಮಲ್ಲೇ ಊಟ ಮಾಡಿ ಮಲಗೇನು?" ಎಂದಳು ಪಾರ್ವತಕ್ಕ. ಇನ್ನಷ್ಟು ಹೊತ್ತು ಹರಟೆ ಹೊಡೆಯಲು ಒಳ್ಳೆಯ ಜತೆ ಸಿಕ್ಕಿತೆಂದು ಪಾರ್ವತಕ್ಕನಿಗೆ ಖುಶಿ.

ಗಂಡ ಬರುತ್ತಾನೆಂಬ ಸಂಗತಿ ಮರೆತು ಹೋಗಿ ಮಂಗಮ್ಮ ಅಲ್ಲೇ ಊಟಮಾಡಿ ಮಲಗಿಕೊಂಡಳು.

ರಾತ್ರಿ ಸ್ವಲ್ಪ ಹೊತ್ತಾದ ಮೇಲೆ ಈಶ್ವರಯ್ಯ ಮನೆಗೆ ಬಂದನು. ಮನೆಗೆ. ಬೀಗ ಹಾಕಿರುವುದನ್ನು ನೋಡಿ, ಕೆಂಡಕ್ಕೆ ಬಿದ್ದ ಗುಗ್ಗುಳದಂತೆ ಕೋಪದ ಹೊಗೆ ಕಾರತೊಡಗಿದನು. ಹೆಂಡತಿ ಬರುವುದನ್ನೇ ಕಾಯುತ್ತಾ ಅಲ್ಲಿಯೇ ಆಚೆಗೂ ಈಚೆಗೂ ತಿರುಗಾಡುತ್ತಿದ್ದನು.

ಅರ್ಧ ರಾತ್ರಿಯಾಯಿತು. ಈಶ್ವರಯ್ಯ ಮನೆಯ ಮುಂದೆ ನಡೆದಾಡುತ್ತಲೇ ಇದ್ದನು. ಆಗ ಒಬ್ಬ ಕಳ್ಳ ಆ ಕಡೆಗೆ ಬಂದು ಮನೆಯ ಮುಂದೆ ಎಡತಾಕುತ್ತಿದ್ದ ಈಶ್ವರಯ್ಯನನ್ನು ನೋಡಿ, ಅವನು ಕೂಡಾ ತನ್ನ ಹಾಗೇ ಕಳ್ಳನೆಂದೇ ಅಂದುಕೊಂಡು ಅವನ ಹೆಗಲ ಮೇಲೆ ಕೈ ಹಾಕಿ, "ಈ ಮನೆಯೊಳಗೆ ಹೋಗಬೇಕೆಂದು, ನೋಡುವೆಯಲ್ಲವೆ?" ಎಂದನು.

ಆ ಮಾತು ಕೇಳಿ ಈಶ್ವರಯ್ಯ ಮತ್ತಷ್ಟು ರೇಗಿ, "ಹೇಗೆ ಹೋಗುವುದು? ತಾಳೇಕಾಯಷ್ಟು ದೊಡ್ಡ ಬೀಗವಿರುವುದು ಕಾಣೋದಿಲ್ವೆ?" ಎಂದನು.

"ಅದನ್ನು ಕ್ಷಣದಲ್ಲಿ ತೆಗೆದುಬಿಡ್ತೇನೆ. ಯಾರಾದರೂ ಬರುವರೋ ಅಂತ ನೋಡಿಕೊಂಡಿರು. ಒಳಗೆ ಸಿಕ್ಕುವುದನ್ನು ನಾವಿಬ್ಬರೂ ಹಂಚಿಕೊಳ್ಳೋಣ" ಎಂದು ಹೇಳಿ ಕಳ್ಳ ಈಶ್ವರಯ್ಯನ ಪ್ರತ್ಯುತ್ತರವನ್ನು ಎದುರು ನೋಡದೆಯೇ ತನ್ನ ಹತ್ತಿರವಿದ್ದ ಕಳ್ಳ ಬೀಗದ ಕೈಗಳಿಂದ ಕ್ಷಣ ಮಾತ್ರದಲ್ಲಿ ಬಾಗಿಲು ತೆರೆದು ಒಳಗೆ ಹೋದ.

"ಅಮ್ಮ! ಬದುಕಿದೆನಪ್ಪ" ಎಂದುಕೊಂಡು ಈಶ್ವರಯ್ಯ ಕೂಡಾ ಕಳ್ಳನ ಹಿಂದೆಯೇ ಒಳಕ್ಕೆ ಹೊಕ್ಕನು. ಆಗ ಕಳ್ಳ ಪೆಟ್ಟಿಗೆಗಳಿರುವ ಕೋಣೆಯೊಳಗೆ ಹೊಕ್ಕು ಅವುಗಳನ್ನು ತೆರೆಯುವುದರಲ್ಲಿ ಮಗ್ನನಾಗಿದ್ದ.



ಈಶ್ವರಯ್ಯ ತಟ್ಟನೆ ಆ ಕೋಣೆಯ ಬಾಗಿಲನ್ನೆಳೆದು ಹೊರಗಿನಿಂದ ತಾಳ ಜಡಿದು, "ಕಳ್ಳ ಮಗನೇ! ನನ್ನ ಮನೆಯಲ್ಲೇ ಕಳ್ಳತನಕ್ಕೆ ಬಂದೆಯಾ? ಬೆಳಗಾಗಲಿ! ನಿನ್ನ ಸಂಗತಿ ನೋಡುತ್ತೇನೆ!" ಎಂದು ಹೇಳಿ, ತನ್ನ ಕೋಣೆಯೊಳಗೆ ಹೋಗಿ ಬಾಗಿಲು ಹಾಕಿ ಮಲಗಿಕೊಂಡನು. ಈ ಗಡಿಬಿಡಿಯಲ್ಲಿ ಅವನು ಹೊರಗಿನ ಬಾಗಿಲು ತೆರೆದೇ ಇದೆ ಎಂಬ ಸಂಗತಿಯನ್ನು ಮರೆತುಬಿಟ್ಟನು.

ಪಾರ್ವತಕ್ಕನ ಮನೆಯಲ್ಲಿ ಮಲಗಿದ್ದ ಮಂಗಮ್ಮ ನಡುರಾತ್ರಿಯ ಮೇಲೆ ಎಚ್ಚೆತ್ತು "ಅಂದ ಹಾಗೆ ಅವರು ರಾತ್ರಿ ಮನೆಗೆ ಬರುತ್ತೇನೆಂದಿದ್ದರಲ್ಲ! ಈಗ ನೆನಪಾಯಿತು" ಎಂದು ಹೇಳಿ ತನ್ನ ಮನೆಗೆ ಬೇಗ ಬೇಗನೆ ಬಂದಳು. ಹೊರಬಾಗಿಲು ತೆರೆದಿರುವುದನ್ನು ನೋಡಿ, ತಾನು ಬಾಗಿಲು ಹಾಕಲು ಮರೆತೆನಲ್ಲಾ ಎಂದು ತನ್ನ ತಲೆಗೆ ತಾನೇ ಹೊಡೆದುಕೊಂಡು ಒಳಗೆ ಹೊಕ್ಕಳು.

ಕಳ್ಳ ಕಿಟಕಿಯಿಂದ ಯಾವಳೋ ಹೆಂಗುಸು ಬಂದುದನ್ನು ನೋಡಿ, ಬಾಗಿಲ ಹತ್ತಿರ ನಿಂತು, "ಬಾಗಿಲು ತೆಗಿ, ಬೇಗ ಬೇಗ" ಎಂದನು.

ತನ್ನ ಮರೆವನ್ನು ಕುರಿತೇ ಆಲೋಚಿಸಿಕೊಂಡಿದ್ದ ಮಂಗಮ್ಮ ಒಳಗಿರುವವನು ಗಂಡನೆಂದೇ ತಿಳಿದು "ನೀವು ಒಳಗೇ ಇದ್ದೀರೇನು? ಯಾವಾಗ ಬಂದಿರಿ? ನಿಮ್ಮನ್ನು ಒಳಗೇ ಬಿಟ್ಟು ತಾಳ ಹಾಕಿ ಹೋದೇ ಅಂತ ಕಾಣುತ್ತೆ. ನನ್ನ ಮರೆವಿಗೆ ಬೆಂಕೀ ಬೀಳ!" ಎಂದು ಹೇಳಿಕೊಳ್ಳುತ್ತಾ ತಾಳ ತೆಗೆದಳು.

ದಡಲ್ಲನೆ ಬಾಗಿಲು ತೆರೆದು ಕಳ್ಳ ಹೊರಕ್ಕೆ ಬಂದು ಅವಳನ್ನು ಬದಿಗೆ ದೂಡಿ ತೆರೆದ ಬಾಗಿಲಿನಿಂದ ಓಡಿಯೇ ಹೋದನು. ಓಡುವ ಆತುರದಲ್ಲಿದ್ದವನು ಮನೆಯೊಳಗಿಂದ ಏನನ್ನೂ ಕದ್ದುಕೊಳ್ಳಲು ಸ್ಮರಣೆ ಇಲ್ಲದೆ, ತನ್ನ ಹಣದ ಚೀಲವನ್ನು ಕೂಡಾ ಕೋಣೆಯೊಳಗೇ ಬಿಟ್ಟುಬಿಟ್ಟಿದ್ದ.

ಮಂಗಮ್ಮ ಆ ಹಣದ ಚೀಲವನ್ನು ಎತ್ತಿಕೊಂಡು ಅದು ಹೇಗೆ ಬಂತೆಂದು ಅರ್ಥವಾಗದೆ, ಬಾಗಿಲು ಬಡೆದು ಗಂಡನನ್ನು ಎಬ್ಬಿಸಿ ಏನು ಸಂಗತಿ, ಏನಾಯಿತು, ಓಡಿದವನು ಯಾರು ಎಂದು ಬಡಬಡನೆ ಕೇಳಿದಳು,

ರಾತ್ರಿ ಮನೆಯಲ್ಲಿರದೆ, ಸಿಕ್ಕಿಬಿದ್ದ ಕಳ್ಳನನ್ನೂ ಓಡಲು ಬಿಟ್ಟು, ತನ್ನ ನಿದ್ರೆಯನ್ನು ಕೆಡಿಸಿದ ಹೆಂಡತಿಯ ಮೇಲೆ ವಿಪರೀತ ಸಿಟ್ಟು ಬಂದಿದ್ದ ಈಶ್ವರಯ್ಯ, ಅವಳ ಕೈಯಲ್ಲಿರುವ ಹಣದ ಚೀಲ ನೋಡಿ ತಣ್ಣಗಾದನು. ಅವಳ ಮರೆವಿನಿಂದ ಚೀಲದಲ್ಲಿದ್ದ ತುಂಬಾ ಹಣ ಲಾಭವಾಯಿತು ಎಂದು ಅವಳನ್ನು ಮೆಚ್ಚಿದನು. ಕಳ್ಳನನ್ನು ಹಿಡಿದು ಕೊಟ್ಟಿದ್ದರೆ ಆ ಹಣದ ಚೀಲ ದಕ್ಕುತ್ತಿರಲಿಲ್ಲವೆಂದೂ ಅವನಿಗೆ ತೋರಿತು.



# ಮೂಕನಲ್ಲ

ಒಬ್ಬ ವರ್ತಕನು ಕುದುರೆಯ ಮೇಲೆ ಪ್ರಯಾಣ ಮಾಡುತ್ತಾ, ಮಧ್ಯಾಹ್ನದ ವೇಳೆಯಲ್ಲಿ ಒಂದು ಗ್ರಾಮದ ಬದಿಯಲ್ಲಿದ್ದ ಕೊಳವನ್ನು ನೋಡಿ, ಕುದುರೆಯಿಂದಿಳಿದು, ಸಮೀಪದಲ್ಲಿದ್ದ ಮರಕ್ಕೆ ಅದನ್ನು ಕಟ್ಟಿಹಾಕಿ, ಸ್ನಾನ ಮಾಡಲು ಕೊಳಕ್ಕೆ ಇಳಿದನು.

ಅದೇ ಸಮಯದಲ್ಲಿ ಇನ್ನೊಬ್ಬ ಪ್ರಯಾಣಿಕನು ಒಂದು ಸೊರಕಲು ಕುದುರೆಯ ಮೇಲೇರಿಕೊಂಡು ಬಂದು ಇಳಿದು ತನ್ನ ಕುದುರೆಯನ್ನು ಅದೇ ಮರಕ್ಕೆ ಕಟ್ಟಲು ನೋಡಿದನು.

ಅದನ್ನು ನೋಡಿ ಮೊದಲನೆಯವನು "ಅಯ್ಯಾ, ನಿನ್ನ ಕುದುರೆಯನ್ನು ಇನ್ನೊಂದು ಮರಕ್ಕೆ ಕಟ್ಟು, ನನ್ನ ಕುದುರೆ ಬಹಳ ಸೊಕ್ಕಿನದು" ಎಂದು ಕೂಗಿ ಹೇಳಿದನು. ಆದರೆ ಎರಡನೆಯವನು ಲಕ್ಷ್ಯಮಾಡದೆ ತನ್ನ ಕುದುರೆಯನ್ನು ಆ ಮರಕ್ಕೇ ಕಟ್ಟಿದನು.

ಆಮೇಲೆ ಅವನು ಸ್ನಾನ ಊಟಗಳಲ್ಲಿ ಮಗ್ನನಾಗಿರುವಾಗ, ಸೊರಕಲು ಕುದುರೆಯೊಂದಿಗೆ ಸೊಕ್ಕಿನ ಕುದುರೆ ಜಗಳಕ್ಕೆ ಶುರು ಮಾಡಿತು. ಎರಡೂ ಜಗಳಾಡುತ್ತಿರಲು ಸೊರಕಲು ಕುದುರೆ ಸತ್ತುಹೋಯಿತು.

ಪರಿಹಾರ ಕೊಡಬೇಕೆಂದು ಪ್ರಯಾಣಿಕನು ಕೇಳಲು, ವರ್ತಕನು ಒಪ್ಪಲಿಲ್ಲ. ಇಬ್ಬರೂ ಊರ ನ್ಯಾಯಾಧೀಶನ ಬಳಿಗೆ ಹೋದರು. ನ್ಯಾಯಾಧೀಶನು ಸತ್ತಕುದುರೆಯವನ ಫಿರ್ಯಾದಿಯನ್ನು ಕೇಳಿ, "ನೀನೇನು ಹೇಳುವೆ ?" ಎಂದು ವರ್ತಕನನ್ನು ಕೇಳಿದನು. ಏನೂ ಹೇಳಲು ತೋರದೆ ವರ್ತಕನು ದಿಕ್ಕುದಿಕ್ಕು ನೋಡಿದನು.

"ಮೂಕನಾಗಿರುವನಲ್ಲಾ ? ಇವನ ಮೇಲೆಯೋ ಫಿರ್ಯಾದಿ ತರುವುದು ? ಎಂದ ನ್ಯಾಯಾಧಿಕಾರಿ.

"ಮೂಕನಲ್ಲ ! ತನ್ನದು ಸೊಕ್ಕಿನ ಕುದುರೆಯೆಂದೂ ನನ್ನ ಕುದುರೆಯನ್ನು ಬೇರೆ ಮರಕ್ಕೆ ಕಟ್ಟು ಎಂದೂ ಊರೆಲ್ಲಾ ಕೇಳುವ ಹಾಗೆ ಕೂಗಿ ಹೇಳಿದ್ದಾನೆ !" ಎಂದ ಪ್ರಯಾಣಿಕ.

ಅವನು ಮಾತಿನಲ್ಲಿ ಸಿಕ್ಕಿಬಿದ್ದ. ಅವನ ಫಿರ್ಯಾದಿ ನಿಲ್ಲಲಿಲ್ಲ.

— ಡಾ॥ ನ. ಗಂಗಾಧರನ್







# ಅದ್ಭುತ ವಸ್ತುಗಳು

ಒಂದು ಊರಿನಲ್ಲಿ ಒಬ್ಬ ಹಳೆಯ ಜಮೀನ್ದಾರನಿದ್ದನು. ಹಿಂದೆ ಅವನ ಮನೆತನಕ್ಕಿದ್ದ ವೈಭವದ ಸಂಪನ್ನತೆಗಳು ಈಗ ಏನಿರಲಿಲ್ಲ, ಆದರೂ ತನ್ನ ದೊಡ್ಡಸ್ತಿಕೆಯ ಮನೋಭಾವವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದನು. ಆತನಿಗೆ ಭಾಗ್ಯವತಿ ಎಂಬ ಮೊಮ್ಮಗಳೊಬ್ಬಳಿದ್ದಳು. ಅವಳು ಅಸಾಮಾನ್ಯ ಸುಂದರಿಯಾಗಿದ್ದುದರಿಂದ ಅನೇಕಮಂದಿ ಯುವಕರು ಅವಳನ್ನು ಮದುವೆಯಾಗಲು ನಾನು ತಾನೆಂದು ಬರತೊಡಗಿದರು. ಹಾಗೆ ಬಂದ ವರಂದಿರ ಹತ್ತಿರ ಮುದುಕ ಜಮೀನ್ದಾರನು ಒಂದು ಪರೀಕ್ಷೆಯನ್ನು ಹೇಳುತ್ತಿದ್ದನು. ಯಾವಳೋ ರಾಜಕುಮಾರಿಯ ಹಾಗೆ ತನ್ನ ಮೊಮ್ಮಗಳ ಮದುವೆ ಆಗಬೇಕೆಂಬುದು ಅವನ ಆಶೆ. ಆ ಪರೀಕ್ಷೆ ಏನೆಂದರೆ: ಮೂರು ದಿಕ್ಕುಗಳಲ್ಲಿರುವ ಮೂರು ಅದ್ಭುತ ವಸ್ತುಗಳನ್ನು ತರಬೇಕು. ಅಂಥವನಿಗೆ ತನ್ನ ಮೊಮ್ಮಗಳನ್ನು ಕೊಟ್ಟು ಮದುವೆ ಮಾಡುತ್ತಾನೆ.

ಕೆಲಮಂದಿ ಸಾಹಸಿಕರಾದ ಯುವಕರು ಜಮೀನ್ದಾರನು ಹೇಳಿದ ಕೆಲಸಕ್ಕೆ ಪ್ರಯತ್ನಿಸಿ ಸಾಧ್ಯವಾಗದೆ ತಲೆ ತಗ್ಗಿಸಿಕೊಂಡುಹೋದರು.

ಆ ಊರಲ್ಲಿಯೇ ಜಯಂತನೆಂಬ ಕ್ಷತ್ರಿಯ ಯುವಕನೊಬ್ಬನಿದ್ದನು. ಅವನು ಅಪರಿಮಿತ ಸಾಹಸಿಯೆಂದು ಎಷ್ಟೋ ಕಾಲದಿಂದ ಹೆಸರು ಪಡೆದಿದ್ದನು. ಅವನು ಭಾಗ್ಯವತಿಯನ್ನು ಮದುವೆಯಾಗಲು ನಿಶ್ಚಯಿಸಿ, ಕತ್ತಿಯನ್ನು ಸೊಂಟಕ್ಕೆ ತಗಲಿಸಿ ಕುದುರೆಯ ಮೇಲೇರಿಕೊಂಡು ಬಂದನು.

ಅವನನ್ನು ನೋಡಿ ಜಮೀನ್ದಾರನು, ಬಂದ ಕಾರ್ಯ ವಿಚಾರಿಸಿ, "ನಿನಗೆ ಗೊತ್ತಿಲ್ಲವೇನು? ನನ್ನ ಮೊಮ್ಮಗಳನ್ನು ಮದುವೆಯಾಗಬೇಕಾದರೆ ನಾನು ಹೇಳುವ ಮೂರು ಅದ್ಭುತ ವಸ್ತುಗಳನ್ನು ತರಬೇಕು." ಎಂದನು.

"ಗೊತ್ತಿದೆ. ತರುತ್ತೇನೆ. ಅವುಗಳೇನೆಂಬುದನ್ನು ಹೇಳಿ ಮತ್ತೆ" ಎಂದು ಕೇಳಿದ ಜಯಂತ.

"ಹೀಗೆ ದಕ್ಷಿಣ ದಿಕ್ಕಿಗೆ ಹೋದರೆ ಒಂದು ಪಾಳು ಬಿದ್ದ ದೇವಾಲಯ ಬರುತ್ತದೆ. ಅದರ ಆವರಣದೊಳಗೆ ಎಲ್ಲಿಯೋ ಭೂಗರ್ಭದ ಗುಹೆಯೊಂದಿದೆಯಂತೆ. ಆ ಗುಹೆಯೊಳಗೆ ಒಂದು ಢಕ್ಕೆ ಇದೆಯಂತೆ. ಅದನ್ನು ಬಾರಿಸಿದರೆ ಕೆಲಮಂದಿ ಮನುಷ್ಯರು ಬಂದು ನಾವು ಹೇಳಿದ ಕೆಲಸ ಮಾಡುತ್ತಾರಂತೆ. ಮೊದಲು

ಎಂ. ಮನೋಹರ

ನೀನು ಆ ಢಕ್ಕೆಯನ್ನು ತೆಗೆದುಕೊಂಡುಬಂದರೆ, ಉಳಿದೆರಡು ವಸ್ತುಗಳನ್ನು ಕುರಿತು ಆಮೇಲೆ ಹೇಳುತ್ತೇನೆ" ಎಂದ ಜಮೀನ್ದಾರ.

ಸರಿಯೆಂದು ಜಯಂತನು ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡಿದನು. ಎಲ್ಲಿಗೆ ಹೋದನೋ ಏನೋ ಮಾಡಿದನೋ? ಹತ್ತು ದಿನಗಳ ಮೇಲೆ ಹಿಂದಿರುಗಿ ಜಮೀನ್ದಾರನ ಮನೆಗೆ ಬಂದನು. ಆಗ ಅವನು ತುಂಬಾ ದಣಿದು ಸುಸ್ತಾಗಿ ಹೋಗಿದ್ದನು. ಅದ್ಭುತ ವಸ್ತುಗಳನ್ನು ತರುವೆನೆಂದು ಹೋದವರು ಹಿಂದಿರುಗಿ ಬಂದದ್ದೇ ಇಲ್ಲ. ಅಂತೆಯೇ ಜಮೀನ್ದಾರನು ಜಯಂತನನ್ನು ನೋಡಿ ಆಶ್ಚರ್ಯಪಟ್ಟು, "ಢಕ್ಕೆ ತಂದೆಯಾ?" ಎಂದು ಕೇಳಿದನು.

ಜಯಂತನು ತನ್ನ ಚೀಲದೊಳಗಿನಿಂದ ಢಕ್ಕೆಯನ್ನು ತೆಗೆದು, ಜಮೀನ್ದಾರನಿಗೆ ಕೊಟ್ಟನು. ಜಮೀನ್ದಾರನು ಢಕ್ಕೆಯನ್ನು ಎಲ್ಲಾ ಬದಿ ತಿರುಗಿಸಿ ನೋಡಿ, ಅದನ್ನು ಬಾರಿಸಿದನು. ಆಗ ಎಲ್ಲಿಂದಲೋ ಹತ್ತು ಮಂದಿ ಮನುಷ್ಯರು ದಡದಡನೆ ಬಂದು ನಿಂತು "ಏನಾಗಬೇಕು ಸ್ವಾಮೀ?" ಎಂದು ಕೇಳಿದರು.

"ನನ್ನ ತೋಟಕ್ಕೆ ಚೆಂದಾಗಿ ಬೇಲಿ ಹಾಕಬೇಕು" ಎಂದ ಜಮೀನ್ದಾರ. ಅವರು ತೋಟಕ್ಕೆ ಹೋಗಿ ಅವನು ಹೇಳಿದ ಕೆಲಸಮಾಡತೊಡಗಿದರು.

"ಇನ್ನು ಎರಡನೇ ವಸ್ತುವಿನ ವಿವರ ಹೇಳಿ" ಎಂದು ಜಯಂತನು ಜಮೀನ್ದಾರನನ್ನು ಕೇಳಿದ.

"ಹೀಗೆ ಪಶ್ಚಿಮ ದಿಕ್ಕಿಗೆ ಹೋಗಬೇಕು. ಅಲ್ಲಿಯೂ ಒಂದು ಪಾಳುಬಿದ್ದ ದೇವಸ್ಥಾನ ಬರುತ್ತದೆ. ಅದರ ಕೆಳಗೆ ಎಲ್ಲಿಯೋ ಭೂಗರ್ಭದಲ್ಲಿ ಒಂದು ತಾಯಿತ್ತು ಇದೆ. ಅದನ್ನು ಕಟ್ಟಿಕೊಂಡವರು ಕಾಲ ಕಳೆದಂತೆ ಚಿಕ್ಕವರಾಗಿ ಬಿಡುತ್ತಾರೆ. ಆ ತಾಯಿತ್ತನ್ನು ತಂದುಕೊಡಬೇಕು" ಎಂದ ಮುದಿ ಜಮೀನ್ದಾರ.

"ಒಳ್ಳೆಯದೆಂದು ಜಯಂತನು ಪಶ್ಚಿಮ ದಿಕ್ಕಿಗೆ ಹೊರಟು, ಬದಿಗೆ ತಿರುಗಿ ನೋಡಲು, ಕಿಟಿಕೀ ಹತ್ತಿರ ನಿಂತು ತನ್ನನ್ನು ಆಶ್ಚರ್ಯದಿಂದ ನೋಡುವ ಭಾಗ್ಯವತಿಯನ್ನು ಕಂಡನು. ಅವಳನ್ನೇ ನೆನೆಯುತ್ತಾ ಎಲ್ಲಿಗೋ ಹೋದನು. ಕೆಲವು ದಿನಗಳ ಮೇಲೆ



ಜಯಂತನು ಧೂಳಿನಿಂದ ಬೆಂದಿಯಾದ ಬಟ್ಟೆಗಳಿಂದ ತುಂಬಾ ದಣಿದು ತೇಕುತ್ತಾ ಹಿಂದಿರುಗಿ ಬಂದು ಜಮೀನ್ದಾರನಿಗೆ ತಾಯತ್ತನ್ನು ತೆಗೆದುಕೊಟ್ಟನು.

ಜಮೀನ್ದಾರನು ಆ ತಾಯತ್ತನ್ನು ತನ್ನ ಕೈಗೆ ಕಟ್ಟಿ ಕೊಳ್ಳುತ್ತ, "ಭೇಷ್ ! ನೀನೇ ನಮ್ಮ ಭಾಗ್ಯವತಿಗೆ ತಕ್ಕ ಗಂಡ. ಇನ್ನು ಉತ್ತರ ದಿಕ್ಕಿಗೆ ಹೋಗಿ ಅಲ್ಲಿರುವ ಹಾಳುಬಿದ್ದ ದೇವಾಲಯದೊಳಗಿರುವ ಮಾತಾಡುವ ಗಿಳಿಯನ್ನು ತೆಗೆದುಕೊಂಡು ಬಾ. ಪರೀಕ್ಷೆ ಮುಗಿಯಿತು !" ಎಂದನು.

ಜಯಂತನು ಆ ಕಡೆಗೆ ಹೊರಡುತ್ತಾ ಕಿಟಕೀ ಕಡೆಗೆ ನೋಡಿದ. ಭಾಗ್ಯವತಿ ಅರಳು ಕಣ್ಣುಗಳಿಂದ ತನ್ನನ್ನೇ ನೋಡುತ್ತಿರುವುದನ್ನು ಕಂಡು ಆನಂದ ಪುಳಕಿತನಾಗಿ ನಡೆದನು. ಕೆಲವು ದಿನಗಳ ಮೇಲೆ ಜಯಂತನು ಹಿಂದಿರುಗಿ ಬಂದನು. ಅವನ ಶರೀರ ದಲ್ಲಿ ಕೆಲವು ಗಾಯಗಳಾಗಿ ಬಟ್ಟೆಗಳೂ ಹರಿದಿದ್ದುವು. ತನ್ನೊಂದಿಗೆ ತಂದಿದ್ದ ಪಂಜರವನ್ನು ಜಮೀನ್ದಾರನ ಮುಂದೆ ಇಟ್ಟನು. ಅದರೊಳಗೆ ಗಿಳಿ ಇದ್ದಿತು.

"ಗಿಳಿಯೇ, ಗಿಳಿಯೇ ! ನನಗೆ ನೂರು ವರಹಗಳು ಬೇಕು !" ಎಂದು ಜಮೀನ್ದಾರನು ಗಿಳಿಯೊಂದಿಗೆ ಹೇಳಿದ. "ನಾಳೆ ಬೆಳಿಗ್ಗೆ ನೂರು ವರಹಗಳು ಸಿಕ್ಕುತ್ತೆ ಹೋಗು !" ಎಂದಿತು ಗಿಳಿ ಅಲಕ್ಷ್ಯವಾಗಿ. ಆ ದಿನ ರಾತ್ರಿ ಜಮೀನ್ದಾರನು ಜಯಂತನನ್ನು ತನ್ನ ಅತಿಥಿಯಾಗಿ ಇಟ್ಟುಕೊಂಡು ಉಪಚರಿಸಿದನು. ಮರುದಿನ ಬೆಳಿಗ್ಗೆ ಜಮೀನ್ದಾರನು ಬಾಗಿಲು ತೆರೆದು ಹೊರಗೆ ಬರುವಾಗ, ಜಗಲಿಯಲ್ಲಿ ನೂರು ವರಹಗಳ ಮೂಟೆಯೊಂದು ಇರುವುದನ್ನು ನೋಡಿದನು.

ಆ ಮೇಲೇನು ? ಜಮೀನ್ದಾರನು ಅತಿ ಶೀಘ್ರ ದಲ್ಲಿ ತನ್ನ ಮೊಮ್ಮಗಳು ಭಾಗ್ಯವತಿಯನ್ನು ಜಯಂತನಿಗೆ ಕೊಟ್ಟು ಮದುವೆ ಮಾಡಿದನು. ಜಯಂತನು ಭಾಗ್ಯವತಿಯನ್ನು ತನ್ನ ಮನೆಗೆ ಕರೆದು ಕೊಂಡುಹೋದನು.

ಮತ್ತೊಂದು ದಿನ ಜಮೀನ್ದಾರನು ಗಿಳಿಯೊಂದಿಗೆ, "ಗಿಳಿಯೇ, ನನಗೆ ಸಾವಿರ ವರಹಗಳು ಬೇಕು !" ಎಂದನು.

"ಇನ್ನೇನಿದೆ ? ಮದುವೆಯಾಯಿತು, ಪರೀಕ್ಷೆ ಮುಗೀತು, ನಾಟಕ ಬೆಳಗಾಯ್ತು ! ನನ್ನ ಬಿಡು ! ನನ್ನ ಯಜಮಾನ ಜಯಂತ !" ಎಂದು ಹೇಳಿ ಗಿಳಿ ಪಂಜರದ ಬಾಗಿಲನ್ನು ದೂಡಿ ತುರ್ರನೆ ಹಾರಿ ಹೊರಟುಹೋಯಿತು. ಜಮೀನ್ದಾರನು ಹತಾಶ ನಾಗಿ ಥಕ್ಕೆಯನ್ನು ತೆಗೆದು ಬಾರಿಸಿದನು. ಥಕ್ಕೆ ಒಡೆದು ಹೋಯಿತೇ ಹೊರತು ಮನುಷ್ಯರಾರೂ ಬರಲಿಲ್ಲ.

ಜಮೀನ್ದಾರನು ತನ್ನ ಕೈಗೆ ಕಟ್ಟಿಕೊಂಡ ತಾಯತ್ತನ್ನು ಕಿತ್ತು ಬಿಸುಡುತ್ತ "ಮೋಸ ! ಮೋಸ !" ಎಂದು ತಲೆ ಚಚ್ಚಿಕೊಂಡನು.





# ಪಂಡಿತನ ಲೆಕ್ಕ

ಒಂದಾನೊಂದು ಊರಿನಲ್ಲಿ ದಿಗಂಬರನೆಂಬ ಒಬ್ಬ ಪಂಡಿತನಿದ್ದನು. ಅವನು ಆ ಊರಿನ ಪ್ರಾಥಮಿಕ ಪಾಠಶಾಲೆಯಲ್ಲಿ ಮಾಸ್ತರಿಕೆ ಮಾಡಿಕೊಂಡಿದ್ದನು. ಬಡತನದಿಂದಲೇ ಆತನ ಜೀವನ ರಥ ನಡೆಯುತ್ತಿತ್ತು. ಅವನು ಒಳ್ಳೆಯವನಾದುದರಿಂದ ಊರವರ ಪ್ರೀತಿಗೂ ಗೌರವಕ್ಕೂ ಪಾತ್ರನಾಗಿದ್ದನು.

ಅವನ ಮಗಳು ಸುಲೇಖ ಮತ್ತೊಂದು ಗ್ರಾಮದಲ್ಲಿದ್ದ ಉಪಾಧ್ಯಾಯನ ಹೆಂಡತಿಯಾಗಿದ್ದಳು. ಅವಳು ವರ್ಷಕ್ಕೊಂದು ಬಾರಿ ತಂದೆಯನ್ನು ನೋಡಲು ಬಂದು ಹೋಗುತ್ತಿದ್ದಳು. ದಿಗಂಬರನು ವರ್ಷಕ್ಕೊಂದೆರಡು ಬಾರಿ ಮಗಳನ್ನು ನೋಡಲು ಹೋಗಿ ಬರುತ್ತಿದ್ದನು,

ಸುಲೇಖಳಿಗೆ ಮದುವೆಯಾದ ಮೇಲೆ ಕೆಲವು ದಿನಗಳಲ್ಲಿ ಅವಳ ತಾಯಿ ತೀರಿಹೋಗಿದ್ದಳು. ಆದುದರಿಂದ ಮನೆಯನ್ನೂ ಶಾಲೆಯನ್ನೂ ದಿಗಂಬರನೇ ನೋಡಿಕೊಳ್ಳಬೇಕಾಯಿತು. ದಿಗಂಬರ ಮಾಸ್ತರನಿಗೆ ವಿಶ್ರಾಂತಿ ತುಂಬಾ ಕಡಮೆಯಾಯಿತು. ಹೆಂಡತಿ ಇಲ್ಲದೆ ಮನೆಯಲ್ಲಿ ಒಂದು ಜನ ಕಡಮೆಯಾದುದರಿಂದ ಖರ್ಚು ಕೂಡ ಸ್ವಲ್ಪ ಕಡಿಮೆಯಾಯಿತು. ಹಾಗೆ ಉಳಿಯುವ ಹಣದೊಂದಿಗೆ ತನ್ನ ಸಂಬಳದಿಂದಲೂ ಸ್ವಲ್ಪ ಹಣವನ್ನು ಸೇರಿಸಿ ಬೇರೆ ಇಡತೊಡಗಿದನು.

ಏಕೆಂದರೆ, ಮಗಳಿಗೊಂದು ಚಿನ್ನದ ಸರ ಮಾಡಿಸಬೇಕೆಂಬುದು ಅವನ ಆಸೆ. ಮದುವೆಯ ಸಮಯದಲ್ಲಿ ಅವಳಿಗೇನೂ ಕೊಟ್ಟಿರಲಿಲ್ಲ. ಹಾಗೆ ತಿಂಗತಿಂಗಳೂ ಉಳಿಸಿದ ಹಣವನ್ನು ನಕುಲೇಶನೆಂಬ ಸ್ವರ್ಣಕಾರನಿಗೆ ಕೊಡುತ್ತಿದ್ದನು. ಹಾಗೆ ಎರಡು ವರ್ಷ ಹಣ ಕೊಟ್ಟಮೇಲೆ ನಕುಲೇಶಾಚಾರಿ ಚಿನ್ನದ ಸರಮಾಡಿ ಕೊಡುತ್ತಾನೆಂದು ಮಾತಾಡಲ್ಪಟ್ಟಿತ್ತು.

ಸುಲೇಖ ತನ್ನನ್ನು ನೋಡಲು ಬಂದಾಗ ದಿಗಂಬರನು ತಾನು ಚಿನ್ನದ ಸರಕ್ಕೆ ಮಾಡಿದ ಏರ್ಪಾಡನ್ನು ಕುರಿತು ಮಗಳಿಗೂ ಹೇಳಿದನು. ಅದಕ್ಕೆ ಅವಳು, "ಅದೆಲ್ಲಾ ಏತಕ್ಕೆ ಅಪ್ಪಾ? ನಿಮಗೆ ವಯಸ್ಸಾಗಿದೆ. ಒಳ್ಳೆಯ ಹಾಲೂ ಪುಷ್ಟಿಕರವಾದ ಆಹಾರವನ್ನೂ ತೆಗೆದುಕೊಳ್ಳುವುದನ್ನು ಬಿಟ್ಟು ಹಣ ಉಳಿಸುವುದೇಕೆ ಅಪ್ಪಾ?" ಎಂದಳು.

"ಹಾಗಲ್ಲಮ್ಮಾ. ನಿನ್ನ ಮದುವೆಗೆ ಕೂಡಾ ನಾವೇನೂ ನಗನಟ್ಟು ಮಾಡಿಸಿಕೊಡಲಿಲ್ಲ. ನಿನ್ನ

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು



ಕೊರಳಿಗೊಂದು ಚಿನ್ನದ ಸರ ಮಾಡಿಸಬೇಕೆಂದು ನಿನ್ನಮ್ಮ ಯಾವಾಗಲೂ ಹೇಳಿಕೊಂಡಿದ್ದಳು. ಅವಳ ಆಶೆ ನೆರವೇರಲಿ. ಮತ್ತೆ ನೋಡೋಣ ನನ್ನ ತುಷ್ಟಿಪುಷ್ಟಿ. ನನಗೇನಾಗಬೇಕಾಗಿದೆ ಮೈಯಲ್ಲಿ ಬಲ ಬಂದು ? ಕಡಿಯಲಿಕ್ಕಿದೆಯೇ ಕೊಚ್ಚಲಿಕ್ಕಿದೆಯೇ ?'' ಎಂದು ದಿಗಂಬರನು ಮಗಳಿಗೆ ಸಮಾಧಾನ ಹೇಳಿದನು.

ನಕುಲೇಶಾಚಾರಿಗೆ ಹಣ ಕೊಡುವ ಗಡು ಎರಡು ವರ್ಷ ತುಂಬಿತೆನ್ನುವಷ್ಟರಲ್ಲಿ ಒಂದು ದಿನ ದಿಗಂಬರ ನಿಗೆ ಶಾಲೆಯಲ್ಲಿ ಎದೆನೋವೆದ್ದು ಬೋದತಪ್ಪಿ ಬಿದ್ದನು. ವಿದ್ಯಾರ್ಥಿಗಳು ಹೆದರಿ ಗಾಬರಿಯಾಗಿ, ಊರವರನ್ನೆಲ್ಲ ಕರೆದರು. ಎಲ್ಲರೂ ಸೇರಿ ದಿಗಂಬರ ಮಾಸ್ತರನ್ನು ಮನೆಗೆ ತಂದರು. ವೈದ್ಯನು ಬಂದು ಏನೋ ಚಿಕಿತ್ಸೆ ಕೂಡಾ ಮಾಡಿದನು. ಸುಲೇಖ ಳಿಗೂ ಸಮಾಚಾರ ಹೋಯಿತು. ಗ್ರಾಮಸ್ಥರು ಕೆಲವರು ಸಮಯ ಭಾಗ ಮಾಡಿಕೊಂಡು, ಹಗಲೂ ರಾತ್ರಿ ದಿಗಂಬರನನ್ನು ಆರೈಕೆ ಮಾಡು ತ್ತಿದ್ದರು. ಅಷ್ಟರಲ್ಲಿ ಸುಲೇಖ ತನ್ನ ಗಂಡನೊಂದಿಗೆ ಬಂದು ಸೇರಿದಳು.

ದಿಗಂಬರನು ಮೂರು ದಿನಗಳ ವರೆಗೆ ಬೋದ ವಿಲ್ಲದಿದ್ದು, ನಾಲ್ಕನೇ ದಿನ ಮಧ್ಯಾಹ್ನ ಸ್ವಲ್ಪ ಹೊತ್ತು ಕಣ್ಣು ತೆರೆದು ಎಲ್ಲರನ್ನೂ ನೋಡಿದನು. ಮಗಳ ಗುರುತು ಹಿಡಿದನು. ಏನೋ ಹೇಳಲು ಪ್ರಯತ್ನಿಸಿ ದನು. ನಾಲಗೆಯಾಡಲಿಲ್ಲ. ಕಣ್ಣೀರು ತುಂಬಿತು. ಸುಲೇಖಳನ್ನು ನೋಡುತ್ತಾ ಸ್ವಲ್ಪ ಒದರಾಡಿ ಪ್ರಾಣ ಬಿಟ್ಟನು.

ತಂದೆಯ ಉತ್ತರಕ್ರಿಯೆಗಳನ್ನು ಚಂದಾಗಿ ಮಾಡಿಸಿದಳು ಸುಲೇಖ. ಮೊದಲೇ ದಿಗಂಬರನು ತನ್ನ ಮನೆಯ ವಿಷಯವನ್ನು ಊರ ಹಿರಿಯ ರೊಂದಿಗೆ ಹೇಳಿದ್ದಂತೆ, ಅವನ ಮನೆಯನ್ನು ಪಾಠ ಶಾಲೆಗೇ ಕೊಡಿಸಿದಳು.

ಊರಲ್ಲಿದ್ದವರೆಲ್ಲರೂ ಬಂದು ಸುಲೇಖಳನ್ನು ಪರಾಮರ್ಶಿಸಿದರೂ, ನಕುಲೇಶಾಚಾರಿ ಮಾತ್ರ ಬಂದಿರಲಿಲ್ಲ. ಏಕೆ ಬರಲಿಲ್ಲವೋ? ಊರಲ್ಲಿಲ್ಲವೇನೋ ಅಂದುಕೊಂಡಳು. ಆಮೇಲೆ ಏನೋ ಸಂದೇಹ ವಾಯಿತು. ಒಂದು ದಿನ ಸುಲೇಖ ತಾನೇ ಅವನನ್ನು ನೋಡಲು ಊರ ಹಿರಿಯರೊಂದಿಗೆ ಹೋದಳು.

''ಬಾರಮ್ಮ ! ನಿಮ್ಮ ತಂದೆ ದಿಗಂಬರ ಮಾಸ್ತರು ತೀರಿಹೋದುದರಿಂದ ಊರಿಗೆ ದೊಡ್ಡ ನಷ್ಟ ವಾಯಿತು. ಅವರಂಥಾ ಮಾಸ್ತರು ಇನ್ನಾರಿದ್ದಾರೆ ? ನಾನು ನೋಡಲು ಬರೋಣಾಂತಲೇ ಇದ್ದೆ. ಮೈ ಹುಷಾರಿಲ್ಲದ್ದರಿಂದ ಬರಲಾಗಲಿಲ್ಲ'' ಎಂದು ನಕುಲೇಶಾಚಾರಿ ಹಲ್ಲುಗಿಂಜುತ್ತಾ ಹೇಳಿದ.

''ಅದಕ್ಕೇನೂ ಚಿಂತೆಯಿಲ್ಲ. ನಾನೀಗ ಏಕೆ ಬಂದೆ ನೆಂದರೆ, ನನಗೀಗ ತುಂಬಾ ಹಣದ ಮುಗ್ಗಟ್ಟು ಬಂದಿದೆ. ಅಪ್ಪ ನಿಮ್ಮ ಹತ್ತಿರ ಹಣ ಕೊಟ್ಟಿದ್ದಾರಷ್ಟೆ? ಅದನ್ನು ಕೇಳಿ ತೆಗೆದುಕೊಂಡು ಹೋಗೋಣ ಅಂತ

ಬಂದೆ" ಎಂದಳು ಸುಲೇಖ. "ಯಾವ ಹಣವಮ್ಮ? ನನ್ನ ಹತ್ತಿರ ಅವರೇನೂ ಕೊಡಲಿಲ್ಲವಲ್ಲಾ ?" ಎಂದ ನಕುಲೇಶಾಚಾರಿ.

"ನನಗೊಂದು ಚಿನ್ನದ ಸರ ಮಾಡಿಸಲಿಕ್ಕೆ ಹೇಳಿ. ನಿಮ್ಮ ಹತ್ತಿರ ತಿಂಗತಿಂಗಳೂ ಹಣ ಕೊಡುವುದಾಗಿ ನನ್ನ ಹತ್ತಿರ ಹೇಳಿದ್ದರು. ಅವರು ನನ್ನ ಹತ್ತಿರ ಸುಳ್ಳು ಹೇಳಿದ್ದೆಂದು ಹೇಳುವಿರಾ ?" ಎಂದು ಕೇಳಿದಳು ಸುಲೇಖ.

"ಅದು ನನಗೇನು ಗೊತ್ತಮ್ಮ? ನಿಮ್ಮ ತಂದೆಗೆ ನಾನಂತೂ ಏನೂ ಕೊಡಬೇಕಾದ್ದು ಇಲ್ಲ" ಎಂದ ನಕುಲೇಶಾಚಾರಿ.

ಸುಲೇಖಳೊಂದಿಗೆ ನಕುಲೇಶಾಚಾರಿ ಮನೆಗೆ ಬಂದಿದ್ದ ಊರ ಹಿರಿಯರು ಅವನಿಗೆಷ್ಟೋ ಹೇಳಿ ನೋಡಿದರು. ನಕುಲೇಶಾಚಾರಿ ತನ್ನ ಹತ್ತಿರ ದಿಗಂಬರನ ಹಣ ಇರುವುದನ್ನು ಒಪ್ಪಿಕೊಳ್ಳಲೇ ಇಲ್ಲ.

ಬಂದವರಲ್ಲಿ ಸೋಮನಾಥನೆಂಬವನು ಇಂದ್ರಜಾಲ ವಿದ್ಯೆಗಳನ್ನು ಬಲ್ಲ ಜಾಣ. ಅವನು ದೆವ್ವಗಳನ್ನು ಆವಾಹನೆ ಮಾಡುವುದರಲ್ಲಿಯೂ, ಹಿಡಿದ ದೆವ್ವಗಳನ್ನು ಓಡಿಸುವುದರಲ್ಲಿಯೂ ಮಹಾ ಘಟಿಕ. ಅವನು ಮುಂದೆ ಬಂದು, "ಸುಮ್ಮನೆ ಚರ್ಚೆ ಏಕೆ? ಸಾಕ್ಷಿಗಳೂ ಇಲ್ಲ. ಹೋಗಲೀ, ದಿಗಂಬರ ಪಂಡಿತರೇನೋ ಆಕಸ್ಮಿಕವಾಗಿ ಹೋಗಿಬಿಟ್ಟರು. ಎಂತಹ ಪತ್ರವೂ ಪುರಾವೆಯೂ ಇಲ್ಲ. ಆದುದರಿಂದ ಇದೊಂದು ಕಠಿಣ ಸಮಸ್ಯೆಯೇ ಸರಿ. ಇದನ್ನು ಪರಿಷ್ಕರಿಸಬೇಕಾದರೆ ದಿಗಂಬರರ ಆತ್ಮವನ್ನು ಆವಾಹನೆ ಮಾಡಿ ಸಾಕ್ಷ್ಯ ಹೇಳಿಸುತ್ತೇನೆ. ಅದಕ್ಕೆ ಆಕ್ಷೇಪಣೆ ಏನಿಲ್ಲವಷ್ಟೆ?" ಎಂದು ಕೇಳಿದನು. ಎಲ್ಲರೂ ಹಾಗೇ ಮಾಡಲು ಒಪ್ಪಿದರು. ನಕುಲೇಶಾಚಾರಿಯೂ ಒಪ್ಪಿಕೊಂಡನು.

ಅದಕ್ಕೊಂದು ದಿನವನ್ನೂ ಗೊತ್ತುಮಾಡಲಾಯಿತು. ಆ ದಿನ ದಿಗಂಬರ ಪಂಡಿತನ ಮನೆಯ



ಆವರಣದಲ್ಲಿ ಸತ್ತವನ ಆತ್ಮದ ಅದ್ಭುತವನ್ನು ನೋಡಲು ಜನರು ಗಂಪುಗುಂಪಾಗಿ ಬಂದು ಕೂಡಿದರು. ಕತ್ತಲೆಯಾಗುವುದಕ್ಕೆ ಸ್ವಲ್ಪ ಮೊದಲು ಸೋಮನಾಥನು ಒಂದು ಮಣ್ಣಿನ ಮಡಕೆ ಮತ್ತು ಅಂತಹುದೇ ಬಾಣಲೆಯೊಂದಿಗೆ ಅಲ್ಲಿ ಬಂದು, "ಯಾರಾದರೂ ಬೇಗ ಹೋಗಿ ಮನೆ ಹಿಂದಿನ ನಿಂಬೇ ಗಿಡದಿಂದ ಬೆಳೆದ ನಿಂಬೇ ಹಣ್ಣುಗಳನ್ನೆಲ್ಲಾ ಕೊಯಿದುಕೊಂಡು ಬನ್ನಿ" ಎಂದನು.

ದಿಗಂಬರನ ಮನೆಹಿಂದೆ ಒಂದು ನಿಂಬೆಗಿಡವಿದ್ದಿತು. ಅದು ದಿಗಂಬರನಿಗೆ ಬಹಳ ಪ್ರೀತಿಪಾತ್ರವಾದ ಗಿಡ. ವರ್ಷ ಪೂರಾ ಫಲಬಿಡುವಂತಹದು. ಊಟ[illegible] ದಿನಾ ಅವನಿಗೆ ನಿಂಬೇ ಹಣ್ಣು ಇದ್ದು ತೀರಬೇಕು. ಬಹಳ ಕಾಲದಿಂದ ಆತನಿಗಿರುವ ಕೋರಿಕೆಯನ್ನು ಅನುಸರಿಸಿ ದಿಗಂಬರನ ಶವವನ್ನು ಆ ನಿಂಬೇಗಿಡದ ಸಮೀಪದಲ್ಲೇ ದಹನ ಮಾಡಿದ್ದರು. ಅಲ್ಲಿಗೆ ಇಬ್ಬರು ಮೂವರು ಹೋಗಿ ಬುಟ್ಟಿ ತುಂಬಾ ನಿಂಬೇ ಹಣ್ಣು

ಗಳನ್ನು ಕೊಯ್ದು ತಂದರು. ಸೋಮನಾಥನು ಗ್ರಾಮಸ್ಥರೊಂದಿಗೆ, "ದಿಗಂಬರ ಪಂಡಿತರು ತೀರಿ ಹೋಗಿ ಹದಿನೈದು ದಿನಗಳಾಗಿವೆ. ಒಂದು ತಿಂಗಳ ವರೆಗೂ ಅವರ ಆತ್ಮ ಇಲ್ಲೇ ತಿರುಗುತ್ತಿರುತ್ತದೆ. ಅದನ್ನು ಆವಾಹನೆ ಮಾಡಿ, ಅವರಿಗೆ ಇಷ್ಟವಾದ ನಿಂಬೇ ರಸದ ರುಚಿಯನ್ನು ತೋರಿಸುತ್ತೇನೆ. ಅಯ್ಯಾ, ನಕುಲೇಶಾಚಾರಿ, ದಿಗಂಬರ ಪಂಡಿತರು ನಿನಗೆ ಹಣ ಕೊಟ್ಟಿರುವುದು ನಿಜವಾದರೆ ಅವರು ಈ ಮಡಿಕೆಯೊಳಗೆ ಬಂದಿರುವರೆಂಬುದಕ್ಕೆ ದಾಖಲೆ ಕಾಣುತ್ತದೆ. ಇಲ್ಲದಿದ್ದರೆ ಮಡಕೆ ಏನೂ ಶಬ್ದವಿಲ್ಲದೆ ಸುಮ್ಮನಿರುತ್ತದೆ" ಎಂದನು.

ಸರಿ ಎಂಬಂತೆ ನಕುಲೇಶಾಚಾರಿ ತಲೆಯಾಡಿಸಿದ, ಸೋಮನಾಥನು ಎಲ್ಲಾ ನಿಂಬೇ ಹಣ್ಣುಗಳನ್ನು ಹಚ್ಚಿ ರಸವನ್ನು ಮಡಕೆ ತುಂಬಾ ತುಂಬಿಸಿ ಅದರ ಮೇಲೊಂದು ಬಟ್ಟೆಯನ್ನು ಮುಚ್ಚಿ, ಅದರ ಮೇಲೆ ಬಾಣಲೆಯನ್ನಿಟ್ಟನು. ಆಮೇಲೆ ಏನೋ ಮಂತ್ರೋಚ್ಚಾರಕ್ಕೆ ತೊಡಗಿದನು, ಕೈಯಿಂದ ಏನೇನೋ ಮುದ್ರೆಗಳು.

ನೋಡುತ್ತಿದ್ದಂತೆ ಮಡಕೆಯೊಳಗೆ ಸಂಕ್ಷೋಭವು ಹೊರಡತೊಡಗಿತು. ನಿಂಬೆ ರಸವು ಕುತಕುತವೆನ್ನ ತೊಡಗಿತು. ಮಡಕೆಯೊಳಗಿನಿಂದ ನೊರೆ ಮೇಲೆದ್ದು ಎತ್ತಿತ್ತಿ ಹಾಕತೊಡಗಿತು.

"ದಿಗಂಬರ ಪಂಡಿತರ ಆತ್ಮ ಸಾಕ್ಷ್ಯ ಹೇಳುತ್ತಿದೆ, ಅವರ ಹಣ ನಕುಲೇಶಾಚಾರಿಯ ಹತ್ತಿರವಿರುವುದೆಂದೇ ಇದಕ್ಕೆ ಅರ್ಥ. ಅವನು ಒಪ್ಪಿ ತೀರಲೇ ಬೇಕು. ಇಲ್ಲದಿದ್ದರೆ ಈಗಲೇ ಈ ಆತ್ಮವನ್ನು ನಕುಲೇಶಾಚಾರಿಯ ಮೇಲೆ ಪ್ರಯೋಗಿಸುತ್ತೇನೆ. ಆಮೇಲೆ ಏನೂ ತಿನ್ನಲು ಸಾಧ್ಯವಾಗದಂತೆ ಅವನ ಮನೆಯ ಆಹಾರ ಪದಾರ್ಥವೆಲ್ಲಾ ಕೆಟ್ಟುಹೋಗುತ್ತದೆ" ಎಂದ ಸೋಮನಾಥ.

"ಬೇಡ ಬೇಡ. ನನ್ನ ಹತ್ತಿರ ಹಣವಿರುವ ಮಾತು ನಿಜವೇ. ಲೆಕ್ಕ ಹೇಳುತ್ತೇನೆ. ಅವರ ಮಗಳಿಗೆ ಹಣವೇ ಬೇಕೋ ಚಿನ್ನದ ಸರವೇ ಬೇಕೋ. ಏನು ಬೇಕಾದರೂ ಕೊಡುತ್ತೇನೆ. ದಯಮಾಡಿ ನನ್ನ ತಪ್ಪನ್ನು ಕ್ಷಮಿಸಿಬಿಡಿ." ಎಂದ ನಕುಲೇಶಾಚಾರಿ.

ಸುಲೇಖ ಚಿನ್ನದ ಸರವನ್ನೇ ಕೊಡಲು ಹೇಳಿದಳು. ನಕುಲೇಶಾಚಾರಿ ದಿಗಂಬರನು ಹೇಳಿದಂತಹ ಸರವನ್ನೇ ಮಾಡಿ ಕೊಟ್ಟ. ಸೋಮನಾಥನು ಮಾಡಿದ ಹಸ್ತಲಾಘವವೇನೆಂದರೆ, ಅವನು ಮಡಕೆಗೆ ಮುಚ್ಚಿದ ವಸ್ತ್ರದಲ್ಲಿ ಅಗಸರ ಸೋಡಾದ ಒಂದು ದೊಡ್ಡ ಉಂಡೆಯನ್ನು ಅಡಗಿಸಿಕೊಂಡು ಮೆಲ್ಲಗೆ ಅದನ್ನು ನಿಂಬೆರಸದೊಳಗೆ ಜಾರಿಸಿದ್ದನು. ಆದಕ್ಕೆ ಆಮ್ಲ ತಗಲಿದ ಕೂಡಲೇ ದೊಡ್ಡದಾಗಿ ಉಕ್ಕಿ ಹೊಗೆಯನ್ನೂ ನೊರೆಯನ್ನೂ ಕಾರತೊಡಗಿತ್ತು!





# ವೈದ್ಯನ ಪ್ರಯತ್ನ

ಹಿಂದೆ ವೆಂಕಟಾಪುರದಲ್ಲಿ ಅನಂತಾಚಾರ್ಯರೆಂಬ ವೈದ್ಯರಿದ್ದರು. ಅವರನ್ನು ಬಿಟ್ಟರೆ ಆ ಊರಿನಲ್ಲಿ ಬೇರೆ ವೈದ್ಯರೇ ಇಲ್ಲ. ಸುತ್ತು ಮುತ್ತಲಿನ ಗ್ರಾಮಗಳಿಂದಲೂ ಜನರು ಬಂದು ಅವರನ್ನು ಕರೆದುಕೊಂಡು ಹೋಗುತ್ತಿದ್ದರು.

ಒಂದುಸಾರಿ ಹೊರಗಿನ ಊರಿಗೆ ಹೋದ ಅನಂತಾಚಾರ್ಯರು ಆರು ದಿನಗಳ ಮೇಲೆ ತಿರುಗಿ ಬಂದರು. ಆಗ ಮನೆಯಲ್ಲಿ ಅವರನ್ನೇ ಕಾದು ಕುಳಿತುಕೊಂಡಿದ್ದ ಗ್ರಾಮದ ಕೆಲಮಂದಿ ಮುಖ್ಯಸ್ಥರನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು! ಏನೆಂದು ವಿಚಾರಿಸಲು, ಆ ಊರಿನ ಪಟೇಲರು ಎರಡುದಿನಗಳಿಂದ ಮುಚ್ಚಿದ ಕಣ್ಣು ತೆರೆಯದೆ ಜ್ವರದಲ್ಲಿ ಮಲಗಿರುವ ಸಂಗತಿ ಗೊತ್ತಾಯಿತು. ಕೂಡಲೇ ಅವರು ಅವಸರವಸರವಾಗಿ ತಮ್ಮ ಔಷಧ ಪೆಟ್ಟಿಗೆಯನ್ನು ತೆಗೆದುಕೊಂಡು ಬೇಗಬೇಗನೇ ಪಟೇಲರ ಮನೆಗೆ ಓಡಿದರು.

ಪಟೇಲರಿಗೆ ಜ್ವರ ಕೆಂಡದ ಹಾಗೆ ಕಾಯುತ್ತಿದ್ದಿತು. ಅವರು ಮಲಗಿದ ಕೋಣೆಯ ಹೊರಗೆ ಬಂಧು ಬಳಗದವರೂ, ಊರ ಹಿರಿಯರೂ ಕೂಡಿ, ಏನು ಮಾಡಲೂ ತೋಚದೆ ಅನಂತಾಚಾರ್ಯರ ಬರುವಿಕೆಯನ್ನೇ ಎದುರು ನೋಡಿಕೊಂಡಿದ್ದರು.

ಅನಂತಾಚಾರ್ಯರನ್ನು ನೋಡಿದ ಕೂಡಲೇ ಎಲ್ಲರಿಗೂ ಜೀವ ಬಂತು. ಅವರು ಬೇಗ ಬೇಗ ಬಂದವರೇ ಯಾರನ್ನೂ ಮಾತಾಡಿಸದೆ ನೇರಾಗಿ ರೋಗಿ ಇರುವ ಕೋಣೆಯೊಳಗೆ ಹೋಗಿ ತಮ್ಮ ಹಿಂದೆಯೇ ಬಾಗಿಲು ಹಾಕಿಕೊಂಡರು. ರೋಗಿಗಳನ್ನು ಏಕಾಂತವಾಗಿ ಪರೀಕ್ಷಿಸುವುದೇ ಅವರ ಕ್ರಮವೆಂಬುದು ಎಲ್ಲರಿಗೂ ಗೊತ್ತು.

ಒಳಗೆ ಹೋದ ಆಚಾರ್ಯರು ಎಷ್ಟು ಹೊತ್ತಾದರೂ ಹೊರಗೆ ಬಾರದಿರುವುದನ್ನು ನೋಡಿ, ಒಳಗೆ ಏನು ಚಿಕಿತ್ಸೆ ನಡೆಯುವುದೋ ಎಂದು ಎಲ್ಲರಿಗೂ ಆತುರತೆ ಹೆಚ್ಚಾಗುತಿತ್ತು.

ಅಷ್ಟರಲ್ಲಿ ಆಚಾರ್ಯರು ಬಾಗಿಲು ಚೂರು ತೆರೆದು, "ಅಯ್ಯಾ, ಒಂದು ದೊಡ್ಡ ಆಣಿ ಕೊಡುವಿರಾ?" ಎಂದರು. ಕ್ಷಣ ಮಾತ್ರದಲ್ಲಿ ಯಾರೋ ಒಬ್ಬರು ಒಂದು ಆಣಿ ತಂದುಕೊಟ್ಟರು. ಆಚಾರ್ಯರು ಅದನ್ನು ತೆಗೆದುಕೊಂಡು ಬಾಗಿಲು ಹಾಕಿಕೊಂಡರು.

ಜೆ. ರತ್ನಾ

ಒಳಗಿನಿಂದ ಚಿಕ್ಕಪುಟ್ಟ ಸಪ್ಪಳ ಕೇಳಿಸತೊಡಗಿತು. ಸ್ವಲ್ಪ ಹೊತ್ತಾದ ಮೇಲೆ ಬಾಗಿಲು ಮತ್ತೆ ತುಸು ತೆರೆದು ಆಚಾರ್ಯರು ಮುಖ ಹೊರಗೆ ಹಾಕುವಾಗ, "ಪಟೇಲರಿಗೆ ಹೇಗಿದೆ," ಎಂದು ಹಿರಿಯ ಕರಣಿಕರು ಕೇಳಿದ ಪ್ರಶ್ನೆಯನ್ನು ಲಕ್ಷ್ಯಮಾಡದೆ. "ಪ್ರಸ್ತುತ ಒಂದು ಸುತ್ತಿ ತನ್ನಿ! ಆ ಮೇಲೆ ಎಲ್ಲಾ ಹೇಳುತ್ತೇನೆ!" ಎಂದರು.

ಸುತ್ತಿ ಬಂತು. ಅದನ್ನು ತೆಗೆದುಕೊಂಡು ಆಚಾರ್ಯರು ಮತ್ತೆ ಬಾಗಿಲು ಹಾಕಿಕೊಂಡರು. ಈಸಾರಿ ಕೋಣೆಯೊಳಗಿನಿಂದ ದೊಡ್ಡ ದೊಡ್ಡ ಸಪ್ಪಳ ಕೇಳಿಬರತೊಡಗಿತು. ಅದನ್ನು ಕೇಳಿ ಎಲ್ಲರ ಎದೆಯೂ ಹೊಡೆದುಕೊಳ್ಳತೊಡಗಿತು.

ಮತ್ತೆ ಸ್ವಲ್ಪ ಹೊತ್ತಿಗೆ ಬಾಗಿಲು ಸ್ವಲ್ಪ ತೆರೆದು ಆಚಾರ್ಯರು ಮುಖ ಹೊರಗೆ ಹಾಕಿದರು. ಆಗ ಪಟೇಲರ ತಮ್ಮ ಆತ್ಮಾತುರದಿಂದ, "ಅಣ್ಣಯ್ಯನಿಗೆ ಹೇಗಿದೆ ವೈದ್ಯರೇ? ಕಣ್ಣು ತೆರೆದನೆ?" ಎಂದು ಕೇಳಿದನು.

"ಆ ಸಂಗತಿ ಆಮೇಲೆ ಹೇಳುತ್ತೇನೆ. ಮೊದಲು ಒಂದು ಗುದ್ದಲಿ ಬೇಗನೇ ಬೇಕಾಗಿದೆ!" ಎಂದರು ಆಚಾರ್ಯರು.

ಯಾರೋ ಓಡಿಹೋಗಿ ಗುದ್ದಲಿ ತಂದು ಕೊಟ್ಟರು, ಅದನ್ನು ಎರಡು ಕೈಗಳಿಂದಲೂ ತೆಗೆದುಕೊಂಡು ಆಚಾರ್ಯರು ಮತ್ತೆ ಬಾಗಿಲು ಹಾಕಿಕೊಂಡರು. ಈಸಾರಿ ಹೊರಗೆ ಇದ್ದವರ ಕಿವಿಗೆ ಬಹು ದೊಡ್ಡ ಶಬ್ದಗಳು ಕೇಳತೊಡಗಿದುವು.

ಒಳಗೆ ವೈದ್ಯನು ಏನು ಮಾಡುತ್ತಿದ್ದಾನೆಂಬುದು ಹೊರಗಿದ್ದವರಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಅವರ ಆತುರದ ಕಟ್ಟೆಯೊಡೆಯಿತು, ಕೆಲವರು ಬಾಗಿಲನ್ನು ಬಡಿದು ಆಚಾರ್ಯರನ್ನು ಹೊರಗೆ ಬರುವಂತೆ ಕರೆದರು. ಆಚಾರ್ಯರು ಉತ್ತರ ಕೊಡಲಿಲ್ಲ. ಕರ್ಕಶ ಶಬ್ದಗಳು ನಿಲ್ಲಲೂ ಇಲ್ಲ.

"ಇನ್ನು ಸುಮ್ಮನಿದ್ದರಾಗಲಿಲ್ಲ. ಬಾಗಿಲು ಒಡೆದು ಏನು ಸಂಗತಿ ನೋಡಲೇ ಬೇಕು. ಕಿವಿಗಳೆಲ್ಲ ಹರಿಯುವ ಹಾಗೆ ಅದೆಂಥ ಶಬ್ದ!" ಎಂದರು ತಡೆಯಲಾಗದೆ ಕೆಲವರು.

ನಿಮಿಷ ಮಾತ್ರದಲ್ಲಿ ಬಾಗಿಲನ್ನು ಒಡೆದರು. ಒಳಗೆ ಪಟೇಲರು ಮಂಚದಲ್ಲಿ ನಿತ್ರಾಣರಾಗಿ ಮಲಗಿಕೊಂಡಿದ್ದಾರೆ. ಆಚಾರ್ಯರು ಸಮೀಪದಲ್ಲಿ ನೆಲದ ಮೇಲೆ ಕುಳಿತುಕೊಂಡು, ತನ್ನ ಔಷಧಗಳ ಪೆಟ್ಟಿಗೆಯ ಬೀಗವನ್ನು ಒಡೆದು ಹಾಕಲು ಆಣಿ, ಸುತ್ತಿ, ಗುದ್ದಲಿಗಳನ್ನು ಬಗೆಬಗೆಯಾಗಿ ಪ್ರಯೋಗಿಸಿಕೊಂಡಿದ್ದರು.

ಅದನ್ನು ನೋಡಿ ಅದುವರೆಗೂ ಏನೇನೋ ಗಾಬರಿಯ ಎಣಿಕೆಗಳಿಂದಿದ್ದವರಿಗೆ, ಒಮ್ಮೆಗೇ ನಗು ಎದ್ದು ಬಂದಿತು.





# ಕಿತ್ತೂರು ರಾಣಿ ಚೆನ್ನಮ್ಮ

ಕರ್ನಾಟಕ ಪ್ರಾಂತದಲ್ಲಿರುವ ಕಿತ್ತೂರು ಎಂಬ ರಾಜ್ಯಕ್ಕೆ ರಾಣಿ ಚೆನ್ನಮ್ಮ ಪರಿಪಾಲಕಳಾಗಿ ಬಂದಳು. ಚರಿತ್ರ ಪ್ರಸಿದ್ಧವಾದ ಸಿಪಾಯಿ ದಂಗೆಗೆ ಮೂರು ದಶಾಬ್ದಗಳ ಮುಂಚೆ ದೇಶವನ್ನು ಆಕ್ರಮಿಸಲು ನೋಡುತ್ತಿದ್ದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯವರು, ಕಿತ್ತೂರು ರಾಣಿ ಚೆನ್ನಮ್ಮನಿಂದ ಬಹಳ ಪೆಟ್ಟು ತಿಂದರು.



ಮಲ್ಲಸೂರ್ಜನೆಂಬ ಕಿತ್ತೂರು ರಾಜನಿಗೆ ಎರಡನೆಯ ಹೆಂಡತಿ ರಾಣಿ ಚೆನ್ನಮ್ಮ. ಮೊದಲನೇ ಹೆಂಡತಿಯಾದ ರಾಣಿ ರುದ್ರಮ್ಮನಿಗೂ, ಚೆನ್ನಮ್ಮನಿಗೂ ಒಬ್ಬೊಬ್ಬ ಮಗನಿದ್ದರು. ಆದರೂ ಮಲ್ಲಸೂರ್ಜನ ಮರಣ ಕಾಲದಲ್ಲಿ ರಾಣಿ ಚೆನ್ನಮ್ಮ, ಅವನು ಇನ್ನೊಬ್ಬ ಹುಡುಗನನ್ನು ದತ್ತು ತೆಗೆದುಕೊಳ್ಳುವಂತೆ ಪ್ರೋತ್ಸಾಹಿಸಿದಳು.



ರಾಣಿ ರುದ್ರಮ್ಮನಿಗೆ ರಾಜಕೀಯ ವಿಷಯಗಳಲ್ಲಿ ಯಾವ ಆಸಕ್ತಿಯೂ ಇಲ್ಲ. ಮಲ್ಲಸೂರ್ಜನ ಮರಣಾನಂತರ ರಾಣಿ ಚೆನ್ನಮ್ಮ ರುದ್ರಮ್ಮನ ಕುಮಾರನಿಗೆ ಪಟ್ಟಾಭಿಷೇಕ ಮಾಡಿ, ತನ್ನ ಕುಮಾರನನ್ನು ಅವನಿಗೆ ಅಂಗರಕ್ಷಕನನ್ನಾಗಿ ನಿಯಮಿಸಿದಳು. ಆದರೆ ಅವರಿಬ್ಬರೂ ಅಕಾಲಮರಣಕ್ಕೀಡಾದರು. ಹಾಗಾಗಿ ಚೆನ್ನಮ್ಮ ದತ್ತಪುತ್ರನನ್ನು ರಾಜ್ಯಾಧಿಪತಿಯಾಗಿ ಪ್ರಕಟಿಸಿದಳು.



ಈಸ್ಟ್ ಇಂಡಿಯಾ ಕಂಪೆನಿಯವರು ಆಗಲೇ ದೇಶದ ಹಲವು ಪ್ರಾಂತಗಳನ್ನು ಆಕ್ರಮಿಸಿದ್ದರು. ಕಂಪೆನೀ ಪ್ರತಿನಿಧಿಯಾದ ಥಾಕರೇ ಎಂಬವನು ಸ್ವಲ್ಪ ಸೈನ್ಯದೊಂದಿಗೆ ಬಂದು, ಕಿತ್ತೂರು ಕೋಟೆಯ ಮುಂದೆ ಡೇರೆಗಳನ್ನು ಹಾಕಿ, ತನ್ನೊಂದಿಗೆ ಮಾತಾಡಲು ಬರುವಂತೆ ರಾಣಿ ಚೆನ್ನಮ್ಮನಿಗೆ ಪತ್ರ ಕಳುಹಿಸಿದನು. ಚೆನ್ನಮ್ಮ ತಿರಸ್ಕರಿಸಿಬಿಟ್ಟಳು



ಥಾಕರೇಗೆ ಉಗ್ರತ್ವವೇರಿತು. ಕಿತ್ತೂರು ರಾಜನು ಸತ್ತು ಹೋದುದರಿಂದ, ಆ ರಾಜ್ಯವು ಕಂಪೆನಿಗೇ ಸ್ವಂತವಾಯಿತೆಂದು ಆಗಿಂದಾಗಲೇ ಪ್ರಕಟಪಡಿಸಿ, ಸೈನಿಕರನ್ನು ಕಿತ್ತೂರು ಕೋಟೆಯ ಮೇಲೆ ದಾಳಿ ಮಾಡಲು ಕಳುಹಿಸಿದನು. ಕೋಟೆಯ ಕಡೆಯಿಂದ ರಾಣಿಯ ಸೈನಿಕರು ಗುಂಡಿನ ಮಳೆ ಸುರಿಸಿದರು. ಆ ಗುಂಡಿನ ಹೊಡೆತಕ್ಕೆ ಗುರಿಯಾಗಿ ಥಾಕರೇಯ ಕೈಕೆಳಗಿನ ಬ್ಲಾಕ್, ಡಿಪ್ಪಾನ್ ಎಂಬುವರು ಸತ್ತರು.



ಇದನ್ನು ನೋಡಿ ಥಾಕರೆ ಮತಿಗೆಟ್ಟವನಾಗಿ ತಾನೇ ಕೋಟೆಯ ಮೇಲೆ ಸೈನಿಕರನ್ನು ನಡೆಸಿ ಕೊಂಡು ಹೋದನು. ರಾಣಿ ಚೆನ್ನಮ್ಮ ಸ್ವಯಂ ಹೊರಟು ಬಂದು ಕೋಟೆಯ ರಕ್ಷಣೆಗೆ ತೊಡ ಗಿದಳು. ಅವಳ ಆಜ್ಞೆಯಂತೆ ಒಳ್ಳೆಯ ಗುರಿ ಗಾರನಾದ ಸೈನಿಕನೊಬ್ಬ ಥಾಕರೇಯ ಮೇಲೆ ತುಪಾಕೀ ಪ್ರಯೋಗ ಮಾಡಿದನು. ಥಾಕರೇ ಕುದುರೆಯ ಮೇಲಿನಿಂದ ಉರುಳಿಬಿದ್ದು ಸತ್ತನು. ಅವನ ಸೈನಿಕರು ಭೀತಿಯಿಂದ ಓಡಿಹೋದರು.

ಈ ಯುದ್ಧದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಅನೇಕ ಮಂದಿ ಸೈನಿಕರು ರಾಣಿ ಚೆನ್ನಮ್ಮನಿಗೆ ಖೈದಿಗಳಾಗಿ ದೊರಕಿದರು. ಚೆನ್ನಮ್ಮ ಅವರಿಗೆ ಯಾವ ಹಿಂಸೆಯನ್ನೂ ಕೊಡದೆ, ಕೋಟೆಯೊಳಗೇ ತಕ್ಕ ಸೌಕರ್ಯಗಳೊಂದಿಗೆ ಬಂಧನದಲ್ಲಿ ಇರಿಸಿದಳು.





ಈ ಅಪಜಯದ ವಾರ್ತೆ ಈಸ್ಟ್ ಇಂಡಿಯಾ ಕಂಪೆನಿಯ ಯಜಮಾನರನ್ನು ಕಳವಳಗೊಳಿಸಿತು. ಒಂದು ಚಿಕ್ಕ ರಾಜ್ಯವನ್ನು ಪಾಲಿಸುವ ರಾಣಿಯಿಂದ ಸೋತೆಂದರೆ ತಮ್ಮ ಪ್ರತಿಷ್ಠೆಗೆ ಭಂಗವೆಂದು ಅವರು ಭಾವಿಸಿದರು. ಮೋಸದಿಂದಲಾದರೂ ಸರಿಯೆ, ಕಿತ್ತೂರನ್ನು ವಶಪಡಿಸಿಕೊಳ್ಳಬೇಕೆಂದೇ ನಿಶ್ಚಯಿಸಿದರು.

ಬ್ರಿಟಿಷರು ತಮ್ಮ ಎಲ್ಲಾ ಸೈನ್ಯವನ್ನೂ ಒಂದು ಕಡೆ ಸೇರಿಸಿ, ಈಸಾರಿ ಬಹಳ ದೊಡ್ಡ ಸೇನೆಯೊಂದಿಗೆ ಕಿತ್ತೂರು ಕೋಟೆಯನ್ನು ಸಮೀಪಿಸಿದರು. ಆದರೆ ಅವರು ಕೋಟೆಯನ್ನು ಮುತ್ತಿಗೆ ಹಾಕದೆ, ಖೈದಿಗಳಾಗಿರುವ ತಮ್ಮ ಬ್ರಿಟಿಷ್ ಸೈನಿಕರನ್ನು ಬಿಟ್ಟುಕೊಟ್ಟರೆ, ಹಿಂದಿರುಗಿ ಬಿಡುತ್ತೇವೆಂದು ರಾಣಿ ಚೆನ್ನಮ್ಮನಿಗೆ ವಾರ್ತೆ ಕಳುಹಿಸಿದರು.





ರಾಣಿ ಚೆನ್ನಮ್ಮ ಆ ಮಾತು ನಂಬಿ, ಖೈದಿಗಳಾದ ಬ್ರಿಟಿಷ್ ಸೈನಿಕರೆಲ್ಲರನ್ನೂ ಬಿಡುಗಡೆ ಮಾಡಿ ಕಳುಹಿಸಿದಳು. ಅವರು ರಾಣಿಗೆ ತಮ್ಮ ಕೃತಜ್ಞತೆ ಹೇಳಿ, ತಾವೆಂದಿಗೂ ಕಿತ್ತೂರಿನ ಮೇಲೆ ಕತ್ತಿಕಟ್ಟಲಾರೆವೆಂದು ಪ್ರಮಾಣ ಮಾಡಿ ಹೊರಟುಹೋದರು.



ಬಿಡುಗಡೆಯಾದ ಸೈನಿಕರು ತಮ್ಮ ಡೇರೆಗಳಿಗೆ ಬಂದ ಕೂಡಲೇ ಈಸ್ಟ್ ಇಂಡಿಯಾ ಕಂಪೆನಿಯ ಪಟಾಲಂ ಕಿತ್ತೂರು ಕೋಟೆಯ ಹಲ್ಲೆಗೆ ಪ್ರಾರಂಭಿಸಿತು. ಅಲ್ಲಿ ಖೈದಿಗಳಾಗಿದ್ದು ಬಂದವರ ಮೂಲಕ ಎಲ್ಲೆಲ್ಲಿ ಮದ್ದುಗುಂಡು ಸಾಮಗ್ರಿಗಳಿರುವುದೆಂದು ತಿಳಿದುಕೊಂಡು. ಅದರ ಮೇಲೆಯೇ ಗುಂಡು ಹಾರಿಸಿದರು. ಮದ್ದುಗುಂಡುಗಳೆಲ್ಲಾ ಒಂದೇಸಾರಿ ಸಿಡಿದು ಹೋದುದರಿಂದ ರಾಣಿಗೆ ಕೋಟೆಯನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗಲಿಲ್ಲ.



ಈ ವಿಧವಾಗಿ ಮೋಸದಿಂದ ಈಸ್ಟ್ ಇಂಡಿಯಾ ಕಂಪೆನಿಯವರು ಕಿತ್ತೂರನ್ನು ವಶಪಡಿಸಿಕೊಂಡದ್ದಾಯಿತು. ರಾಣಿ ಚೆನ್ನಮ್ಮ ಖೈದಿಯಾಗಿ ಸಿಕ್ಕಿಕೊಂಡಳು. ಕಿತ್ತೂರು ರಾಜ್ಯದ ಮೇಲೆ ತಮ್ಮ ಆಧಿಪತ್ಯವನ್ನು ಅಂಗೀಕರಿಸಿದರೆ ಅವಳನ್ನು ಬಿಡುಗಡೆ ಮಾಡುವೆವೆಂದು ಕಂಪೆನಿಯವರು ಹೇಳಿದರು. ಅದನ್ನು ಅವಳು ನಿರಾಕರಿಸಿಬಿಟ್ಟಳು. ಈ ವಿಧವಾಗಿ ರಾಣಿ ಚೆನ್ನಮ್ಮ ಬ್ರಿಟಿಷರಿಂದ ಬಿಲ್ಹೊಂಗಲ್ ಎಂಬ ಕೋಟೆಯಲ್ಲಿ ಬಂದಿಯಾಗಿರುತ್ತ, ೧೮೨೯ ನೆಯ ವರ್ಷದಲ್ಲಿ ತೀರಿ ಹೋಗಿ, ಚರಿತ್ರೆಯಲ್ಲಿ ಅಮರಳಾಗಿರುವಳು.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ: ೨೫

### ಗೆದ್ದ ಶೀರ್ಷಿಕೆಗಳು ೧೯೭೮ ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



G. Srinivasamurty



M. Natarajan

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಜನವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ನವೆಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಸ್ನೇಹ - ಸರಸ

ಎರಡನೇ ಫೋಟೋ: ಮೂಕ - ಮಮತೆ

ಕಳುಹಿಸಿದವರು: ಶ್ರೀಮತಿ. ಶಕುಂತಲಾಬಾಯಿ,

ಗೌರ್ನಮೆಂಟ್ ಕ್ವಾರ್ಟರ್ಸ್, ನಂ. ೧೧೩, ದೇರೇ ಬೈಲ್, ಮಂಗಳೂರು, ೬













# ನಮಗೆಲ್ಲರಿಗೂ ಇಷ್ಟವಾದ ಪತ್ರಿಕೆ

# ಚಂದಮಾಮ






## ನಿಮಗೂ ಅಷ್ಟೇತಾನೆ !

**ಚಂದಮಾಮ** ಹೆಂಗುಸರು, ಗಂಡುಸರು, ಮಕ್ಕಳು ಎಲ್ಲರೂ ಓದುತ್ತಾರೆ. ಇದು ಇಂಗ್ಲೀಷ್, ಹಿಂದೀ, ಮರಾಠೀ, ತೆಲುಗು, ಕನ್ನಡ, ತಮಿಳು, ಮಲೆಯಾಳ, ಗುಜರಾತಿ, ಬೆಂಗಾಲೀ, ಒರಿಯಾ, ಪಂಜಾಬಿ, ಅಸ್ಸಾಮೀಸ್ ಈ ಹನ್ನೆರಡು ಭಾಷೆಗಳಲ್ಲಿ ಹೊರಡುತ್ತದೆ. ಈ ಮಕ್ಕಳ ಪತ್ರಿಕೆಯಲ್ಲಿ ಅಪರೂಪವೆನಿಸುವ ಕಥೆಗಳಿರುತ್ತವೆ. ಅವು ಪ್ರತಿ ಹೃದಯವನ್ನೂ ಸಂತೋಷಗೊಳಿಸುತ್ತವೆ.
**ಚಂದಮಾಮ** ಮಕ್ಕಳ ಮಾಸಪತ್ರಿಕೆ. ಇದನ್ನು ಓದಿದರೆ ಚಿಕ್ಕವರ ಉತ್ಸಾಹವು ದೊಡ್ಡವರಿಗೆ ಬರುತ್ತದೆ; ದೊಡ್ಡವರ ವಿಜ್ಞಾನವು ಚಿಕ್ಕವರಿಗೆ ಉಂಟಾಗುತ್ತದೆ.



ಚಂದಾ ವಿವರಗಳಿಗೆ: ಡಾಲ್ಟನ್ ಏಜೆನ್ಸೀಸ್, ಚಂದಮಾಮ ಬಿಲ್ಡಿಂಗ್ಸ್, ಮದ್ರಾಸು-೬೦೦೦೨೬.



# ಮಾಯಾ ಸರೋವರ

## ೨೪

[ಹಂಸ ರಥದ ಮೇಲೆ ದಾಳಿ ಮಾಡಿದ ಜಲವೃಕ ರಾಕ್ಷಸರನ್ನು ಜಯಶೀಲನೂ ಅವನ ಅನುಚರರೂ ಇದಿರಿಸಿ ಹತ ಮಾಡಿದರು. ಮಾಯಾ ಸರೋವರೇಶ್ವರನೂ, ರಾಜಕುಮಾರಿ ಕಾಂಚನಮಾಲೆಯೂ ರಥದಿಂದ ಕೆಳಗೆ ಬಿದ್ದರು. ಅವರು ಬಿದ್ದ ಅರಣ್ಯದ ಕಡೆಯಿಂದ ಬೆಳ್ಳಗಿನ ಹೊಗೆ ಬರುವುದನ್ನು ನೋಡಿ ಎಲ್ಲರೂ ಆ ಕಡೆಗೆ ಹೋದರು.]

ಆಕಾಶದಲ್ಲಿ ಹಂಸ ರಥದ ಮೇಲೆ ರಣ ಹದ್ದುಗಳ ದಾಳಿಯಾಗಿ, ರಥವು ತಲೆಕೆಳಗಾಗಿ, ಮಾಯಾ ಸರೋವರೇಶ್ವರನೂ, ಕಾಂಚನ ಮಾಲೆಯೂ, ರಥದ ಸಾರಥಿಯೂ ಒಂದೇ ಬಾರಿ ಒಂದೇ ಸ್ಥಳಕ್ಕೆ ಬಿದ್ದು ಬಿಡಲಿಲ್ಲ. ಬೇರೆಬೇರೆ ಸ್ಥಳಗಳಲ್ಲಿ ಬಿದ್ದು ಬಿಟ್ಟಿದ್ದರು. ಹಾಗೆ ಬಿದ್ದ ಮಾಯಾ ಸರೋವರೇಶ್ವರನು ವಿಚಿತ್ರವೂ ಭಯಂಕರವೂ ಆದ ಅನುಭವಕ್ಕೆ ಗುರಿಯಾದನು. ಅವನೊಂದು ದೊಡ್ಡ ಗುಡಾಣದಂಥ ಭಾಂಡದೊಳಗಿನ ಬಿಸಿ ನೀರಿಗೆ ಬಿದ್ದು ಬಿಟ್ಟಿದ್ದನು. ತಾನು ಎಲ್ಲಿಗೆ ಬಿದ್ದೆನೆಂದು ಗೊತ್ತಾಗದೆ ತತ್ತಳಿಸಿದನು.

ಅದು ಹೇಗೆಂದರೆ, ಅವನು ಬಿದ್ದ ಸ್ಥಳವು ನರ ಭಕ್ಷಕರಾದ ಆಟವಿಕರಿರುವ ಪ್ರದೇಶ. ಅವರಿಗೆ ಇತ್ತೀಚೆಗೆ ಎಂಟು ಹತ್ತು ದಿನಗಳಿಂದ ತಕ್ಕ ಆಹಾರವೇ ಸಿಗಲಿಲ್ಲ. ಮೃಗಗಳನ್ನು ಬೇಟೆಯಾಡಿ ತಿನ್ನೋಣವೆಂದರೆ ಯಾವ ಮೃಗಗಳೂ ಕಾಣಲಿಲ್ಲ. ಅದಕ್ಕೆ ಕಾರಣವೇನೆಂದರೆ, ಆ ಪ್ರಾಂತಕ್ಕೆ ದೂರ ಪ್ರಾಂತದಿಂದ ಆಹಾರವನ್ನು ಅನ್ವೇಷಿಸುತ್ತಾ ಹುಲಿಗಳ ಗುಂಪೊಂದು ಬಂದಿತ್ತು. ಆ ಹುಲಿಗಳು ಆ ಕಾಡಿನಲ್ಲಿ ಎಲ್ಲಾ ಸಾಧು ಮೃಗಗಳನ್ನೂ ಹೊಂಚು ಹಾಕಿ ಹಿಡಿದು ತಿಂದು ತೀರಿಸಿದ್ದುವು. ಹುಲಿಗಳು ಬೇಟೆ



ಯಾಡುವಾಗ ಹೊರಡಿಸುವ ಭಯಂಕರ ಶಬ್ದಗಳಿಗೆ ಅಂಜಿ, ಉಳಿದ ಮೃಗಗಳೆಲ್ಲ ಗುಡ್ಡಗಳನ್ನು ದಾಟಿ ಎಲ್ಲೆಲ್ಲಿಗೋ ಓಡಿಹೋದುವು. ಹೀಗಾಗಿ ನರಭಕ್ಷಕ ಜಾತಿಯವರಿಗೆ ಅನೇಕ ದಿನಗಳಿಂದ ಬರಗಾಲ ಬಂದಷ್ಟು ಕಷ್ಟವಾಗಿತ್ತು.

ಆ ನರಭಕ್ಷಕರ ನಾಯಕನ ಹೆಸರು ಹೆಬ್ಬುಲಿ ಹೆಗ್ಗ. ಅವನಿಗೆ ಈ ಕಷ್ಟ ಪರಿಸ್ಥಿತಿಯಲ್ಲಿ ತನ್ನ ಗುಂಪಿನ ಕೆಲವರು ಬೇರೆಲ್ಲಿಗಾದರೂ ಪಲಾಯನ ಮಾಡುವ ಹಂಚಿಕೆಯಲ್ಲಿದ್ದಾರೆಂದು ತಿಳಿಯಿತು. ತನ್ನ ಪೂರ್ವಿಕರಿಂದ ತಲೆ ತಲಾಂತರವಾಗಿ ಹುಟ್ಟಿ ಬೆಳೆದು ಬಂದ ಆ ಕಾಡನ್ನು ಬಿಟ್ಟುಹೋಗುವುದೂ, ಹೋಗುವವರನ್ನು ನೋಡಿ ಸುಮ್ಮನಿರುವುದೂ ಮಹಾ ಪಾಪವಾಗಿ ಅವನಿಗೆ ತೋರಿತು. ಹೀಗೆ ತಮ್ಮ ಗುಂಪು ಶಿಥಿಲವಾಗಿಹೋದರೆ ಕರಿಯಾಲದ ಮರದ ಬುಡದ ನೆರಳಿನಲ್ಲಿರುವ ಶಿಥಿಲ ದೇವಾಲಯದ ಕಾಡಮ್ಮ ಮಾತಾಯಿಗೆ ವರ್ಷಕ್ಕೊಂದು ಬಾರಿ ಕೂಡಾ ನರಮಾಂಸದ ನೈವೇದ್ಯ ನೀಡುವವರಾರು? ನೋಡುವವರಾರು ಆ ಮಾತಾಯಿಯನ್ನು? ಅವಳ ಶಾಪಕ್ಕೆ ಗುರಿಯಾದರೆ ತಮ್ಮೆಲ್ಲರ ಗತಿಯೇನಾದೀತು ?

ಹೆಬ್ಬುಲಿಹೆಗ್ಗನು ತಲೆ ಕೊಡರಿಕೊಳ್ಳುತ್ತಾ, " ಹೇಗಾದರೂ ಸರಿ, ಈ ಪ್ರಾಂತದವರಾರೂ ಇಲ್ಲಿಂದ ಹೊರಟು ಹೋಗದ ಹಾಗೆ ಮಾಡಲೇಬೇಕು. ಅದಕ್ಕೆ ಬೇಕಾದ ಶಕ್ತಿಯನ್ನು ಆ ಮಾತಾಯಿಯೇ ನೀಡಬೇಕು. ನಾನೇನು ಮಾಡಬಲ್ಲೆ ? " ಎಂದು ಹೇಳಿಕೊಳ್ಳುತ್ತಾ, ಕರಿಯಾಲದ ಮರದ ಕಾಡಮ್ಮನ ಆಲಯಕ್ಕೆ ಹೊರಟನು.

ಅದು ಯಾವ ತಾತರ ತಾತನ ಕಾಲದ್ದೋ ಏನೋ. ಅದಕ್ಕೆ ಬಾಗಿಲುಗಳೇ ಇರಲಿಲ್ಲ. ಬಿಸಿಲು ಮಳೆ ಬೀಳದ ಹಾಗೆ ಮಾಡು ಕೂಡಾ ಇರಲಿಲ್ಲ, ಮಳೆಗಾಲದಲ್ಲಿ ಮಹಾ ತುಫಾನುಗಳಿಗೆ ತಾಳಲಾರದೆ ಅರಣ್ಯ ಮೃಗಗಳು ಕೆಲವು ಆಗಾಗ ರಾತ್ರಿವೇಳೆಯಲ್ಲಿ ಅದರೊಳಗೆ ಅಡಗಿಕೊಳ್ಳುತ್ತಿದ್ದುವು. ಯಾವಾಗಲಾದರೊಮ್ಮೆ ಪೂಜೆಯ ಕಾಲದಲ್ಲಷ್ಟೇ ಅಲ್ಲಿ ಗದ್ದಲ.

ಆ ದಿನ ಬೆಳಿಗ್ಗೆ ಹೆಬ್ಬುಲಿಹೆಗ್ಗ ಕಾಡಮ್ಮನ ಶಿಥಿಲ ದೇವಾಲಯದೊಳಗೆ ಹೊಕ್ಕು ಒಂದು ಅದ್ಭುತ ದೃಶ್ಯವನ್ನು ನೋಡಿ ಗಕ್ಕನೆ ನಿಂತನು. ಭಾರಿಯಾದೊಂದು ಹೆಬ್ಬಾವು ಕಾಡಮ್ಮ ಮಾತಾಯಿಯ ವಿಗ್ರಹದ ಮುಂದೆ ಒಂದು ತೋಳವನ್ನು ತನ್ನ ಶರೀರದಿಂದ ಸುತ್ತಿಕೊಂಡಿತ್ತು. ಆದರೆ ಹೆಬ್ಬಾವಿನ ತಲೆ ತೋಳದ. ಬಾಯಿಯೊಳಗೆ ಸಿಕ್ಕಿಕೊಂಡಿತ್ತು. ಅವೆರಡೂ ಒಂದನ್ನೊಂದು ಕೊಲ್ಲಲಿಕ್ಕೆ ಅಥವಾ ಜೀವದೊಂದಿಗೆ ಉಳಿದು ತಪ್ಪಿಸಿಕೊಳ್ಳಲಿಕ್ಕೆ ತೀವ್ರವಾಗಿ ಉರುಳಾಡಿಕೊಂಡಿದ್ದುವು. ಎರಡೂ ಸಮಾನ ಬಲವುಳ್ಳವಾಗಿದ್ದುವು.

ಈ ಮಹಾ ದೃಶ್ಯವನ್ನು ನೋಡಿ ಹೆಬ್ಬುಲಿಹೆಗ್ಗ ಭಯಕಂಪಿತನಾಗಿ ಹಿಂದಿರುಗಿ ಸ್ವಲ್ಪ ಓಡಿದ.

ಕಾಡಮ್ಮನ ಮುಂದೆ ಆ ದೃಶ್ಯವಿದ್ದುದರಿಂದ ಆಕೆಯೇ ತನ್ನ ಆಹಾರಕ್ಕಾಗಿ ಅವೆರಡನ್ನೂ ಆ ರೀತಿಯಲ್ಲಿ ಸಿಗಿಸಿಕೊಂಡಿರುವಾಗ ತಾನು ಪ್ರವೇಶಿಸಿದ್ದು ಅಪಚಾರವಾಯಿತೇನೋ ಎಂದು ಅವನಿಗೆ ಭಯವಾದುದರಿಂದ ನಡುಗುತ್ತ ನಿಂತ.



ಆದರೆ ಅಷ್ಟರಲ್ಲಿ ಧೈರ್ಯ ತಂದುಕೊಂಡು, ದೂರದಲ್ಲಿ ಕಾಣುವ ಕಾಡಮ್ಮನ ವಿಗ್ರಹಕ್ಕೆ ಅಡ್ಡಬಿದ್ದು ಗಲ್ಲಗಳನ್ನು ನೆಲಕ್ಕೆ ಬಡಿದು ರಕ್ತಗಾಯಮಾಡಿಕೊಂಡು ಸಮೀಪ ಹೋಗಿ "ಓಮಾ! ಕಾಡಮ್ಮಾ! ಮಾತಾಯಮ್ಮಾ! ನೀನು ತೋರಿಸುವ ಮಹತ್ವದ ದೃಷ್ಟಾಂತ ನನ್ನ ಮೊದ್ದು ಮಂಡೆಗೇನು ತಿಳಿಯುತ್ತೆ? ಹತ್ತು ದಿನಗಳಿಂದ ನಿನ್ನ ಭಕ್ತರಿಗೆ ಆಹಾರವಿಲ್ಲ. ಹಸಿವಿನಿಂದ ಹೊರಳಾಡುತ್ತಿದ್ದೇವೆ. ...ನ್ನ ಕಣ್ಣಿಗೆ ಇಂಥಾ ದೃಶ್ಯವನ್ನು ತೋರಿಸಿ ಏನೆಂದು ಆಜ್ಞಾಪಿಸುತ್ತಿರುವೆಯಮ್ಮಾ?" ಎಂದು ಕೂಗಿ ಕೇಳಿದನು.

ಅವನಿಗೆ ಬರುವ ಪ್ರತ್ಯುತ್ತರವೋ ಎಂಬಂತೆ ಗೋಡೆಯ ಕಲ್ಲುಗಳ ಎಡೆಯಲ್ಲಿ ಕಾಡುಬೆಕ್ಕೊಂದು ತಲೆಹೊರಗೆ ಹಾಕಿ, ಕೇಳುವವರ ಕಿವಿಗಳಲ್ಲಿ ಗಿಂಗುರುಗುಟ್ಟುವಂತೆ "ಮ್ಯಾಂವ್, ಮ್ಯಾಂವ್" ಎಂದಿತು.

"ಹಾಗಂದರೆ? ನನಗೇನು ಅರ್ಥವಾಗುತ್ತೆ ಮಾತಾಯೀ? ಹೌದೌದು! ಮಾತಾಯಮ್ಮನ ಪೂಜಾರೀನ ಕೇಳಬೇಕಾದ್ದೇ. ಇವುಗಳಿಗಿರುವ ಗೂಢಾರ್ಥಗಳನ್ನು ಆ ಮುದುಕನೇ ಅರ್ಥಮಾಡಿ ಹೇಳ ತಕ್ಕವನು!" ಎಂದು ಹೇಳಿಕೊಂಡು ಹೆಬ್ಬುಲಿ ಹೆಗ್ಗ "ಓಮ್ಮಾ, ಮಾತಾಯಮ್ಮಾ!" ಎಂದು ದೊಡ್ಡದಾಗಿ ಕೂಗಿ, ತನ್ನ ಗುಂಪಿನವರಬಳಿಗೆ ಓಡಿ ಹೋಡಿ ಬಂದನು. ಎಲ್ಲರೂ ಕಣ್ಣು ಬಾಯಿಬಿಟ್ಟು ಅವನನ್ನು ನೋಡತೊಡಗಿದರು.

ಆ ಸಮಯದಲ್ಲಿ ಚಿಕ್ಕವರೂ ದೊಡ್ಡವರೂ, ಗಂಡೂ ಹೆಣ್ಣೂ ಕೂಡಿದ ನರಭಕ್ಷಕರು, ಅರಣ್ಯದ ನಡುವಿನ ಚಿಕ್ಕ ಮೈದಾನ ಪ್ರದೇಶದಲ್ಲಿ ಗುಂಪಾಗಿ ಕುಳಿತುಕೊಂಡು, ಹೊಟ್ಟೆಯ ವಿಷಯವನ್ನು ಕುರಿತು ಎಲ್ಲರೊಟ್ಟಿಗೆ ಮಾತಾಡಿಕೊಂಡಿದ್ದರು. ಹಸಿವನ್ನು ಇಂಗಿಸಲಿಕ್ಕೆ ಮರದ ಕಾಯಿಗಳನ್ನೋ, ಗೆಡ್ಡೆಬೇರುಗಳನ್ನೋ, ಬೆಳೆದ ಎಲೆ ಚಿಗುರೆಲೆಗಳಲ್ಲಿ ಯಾವುದನ್ನೋ, ತಿಂದರೆ ಒಳ್ಳೆಯದೆಂದು ಚರ್ಚೆಮಾಡುತ್ತ, ಹಾಗಲ್ಲ ಹೀಗೆಂದು ಕಿರಿಚಾಡುತ್ತ, ಜುಟ್ಟು ಹಿಡಿದೆಳೆಯುವ ಪರಿಸ್ಥಿತಿಯಲ್ಲಿದ್ದರಂ.

ಹೆಬ್ಬುಲಿ ಹೆಗ್ಗ ದೊಡ್ಡ ದೊಡ್ಡ ಹಾರಿಕೆಯಿಂದ ಓಡೋಡಿ ಬಂದು, "ಓ ಹೋಯ್! ಕಾಡಮ್ಮಾ ತಾಯಿ ದಯೆಮಾಡಿದಳೂ! ಎಲ್ಲಿ ತಾಯಮ್ಮನ ಪೂಜಾರಿ? ಅದರ ಅರ್ಥ ಹೇಳಬೇಕು. ಬೇಗಬರಲಿ ಮುಂದೆ!" ಎಂದು ದಿಕ್ಕುಗಳು ಪ್ರತಿಧ್ವನಿಸುವಂತೆ ಕೂಗಿದನು.

ನರಭಕ್ಷಕರೆಲ್ಲಾ ಒಂದೇಬಾರಿ ತಮ್ಮ ನಾಯಕನನ್ನು ನೋಡಿದರು. ಅವನ ಮಾತಿನಲ್ಲಿ ಅವರ ಕಣ್ಣಿಗೆ ಜಿಂಕೆಗಳ ಗುಂಪುಗಳೂ, ಕಾಡು ಹಂದಿಯ



ಮಂದೆಯೂ ಕಂಡುಬಂದುವು. ಅವರಲ್ಲಿ ಕೆಲವು ಹುಡುಗರು ಇಷ್ಟಿಷ್ಟೆತ್ತರಕ್ಕೆ ಹಾರಿ ಕುಣಿಯುತ್ತ, "ಹೆಗ್ಗಪ್ಪ ದೊರೇ! ಕಾಡಮ್ಮನ ಗುಡಿಯಲ್ಲಿ ಜಿಂಕೆಗಳು, ಹಂದಿಗಳು ತುಂಬಾ ಸೇರಿವೆಯೇ?" ಎಂದು ಕೇಳಿದರು. "ನಾನು ಮೊದಲು ತಿಂತೇನೆ" ಎಂದು ಅವರೊಳಗೆ ಮಾರಾಮಾರಿ ಏಳತೊಡಗಿತು.

ಹೆಬ್ಬುಲಿಹೆಗ್ಗ ಅದಕ್ಕೇನೂ ಉತ್ತರ ಕೊಡದೆ, ಸುತ್ತಲೂ ಹುಡುಕಾಡಿ ಪೂಜಾರಿಯನ್ನು ಕಾಣದೆ ಬೇಸತ್ತು, "ಓಹೋಯ್, ಹೆಣಪಿಂಡಗಳೇ! ನಾನು ಕೇಳಿದ್ದೇನು? ನೀವು ಹೇಳೋದೇನು? ಮುದುಕ ಪೂಜಾರಿ ಎಲ್ಲಿ? ಕಾಡಮ್ಮನ ಹತ್ತಿರ ಎಂಥದೋ ಗೂಢಾರ್ಥ ಅಲುಗುತ್ತಿದೆ. ಅದನ್ನು ಬಿಡಿಸಿ ಹೇಳುವವನು ಪೂಜಾರಿ ಒಬ್ಬನೇ. ಕರೆಯಿರಿ ಬೇಗ!" ಎಂದು ಕೂಗಿದನು.

ಆಗ ಪೂಜಾರಿ ದೂರದಲ್ಲಿದ್ದೊಂದು ಮರದ ನೆರಳಿನಲ್ಲಿ ಕುಳಿತುಕೊಂಡು ಹಸಿವೆಯಿಂದ ಮಯಕ ಬಂದು ತೂಕಡಿಸಿಕೊಂಡಿದ್ದನು. ಅವನು ಮರದ ಬುಡದಲ್ಲಿರುವ ಸಂಗತಿಯನ್ನು ಹುಡುಗರು ಓಡಿ ಬಂದು ಹೇಳಿದರು. "ಕರೆದರೆ ನೋಡುವುದೇ ಇಲ್ಲ" ಎಂತಲೂ ಹೇಳಿದರು.

ಹೆಬ್ಬುಲಿಹೆಗ್ಗ ಅವನ ಬಳಿಗೆ ಧಾವಿಸಿ ಹೋಗಿ, ತಾನು ಗುಡಿಯಲ್ಲಿ ನೋಡಿದ ದೃಶ್ಯವನ್ನು ಅವನ ಮುಂದೆ ಬಡಬಡನೆ ಹೇಳಿ, ಆಯಾಸದಿಂದ ಉದ್ದದ ಶ್ವಾಸಬಿಟ್ಟು, "ಏಳಯ್ಯಾ! ಇದಕ್ಕೆ ಅರ್ಥವೇನೆಂದು ಬೇಗ ಹೇಳಿಬಿಡು. ನಮಗೆಲ್ಲಾ ಬೇಗದಲ್ಲೇ ಬೇಕಾದಷ್ಟು ಪ್ರಾಣಿಗಳು ಸಿಕ್ಕುವ ಅರ್ಥ ಆ ತೋಳ ಹೆಬ್ಬಾವುಗಳ ಗಂಟಿನಲ್ಲಿದೆಯೋ ತಿಳಿದು ಹೇಳಯ್ಯಾ" ಎಂದು ಕೂಗಿದನು.

ಪೂಜಾರಿ ಅವನು ಹೇಳಿದ ಮಾತನ್ನು ಸರಿಯಾಗಿ ಕೇಳಿಸಿಕೊಳ್ಳದೆ, ಮತ್ತೆ ತೂಕಡಿಸುತ್ತ, "ನಮ್ಮ ಕಾಡಮ್ಮಾ ತಾಯಿಯ ಪೂಜಾರಿತನ ಮಾಡಿ ಮಾಡಿ ನನ್ನ ಕೂದಲೆಲ್ಲಾ ಹಣ್ಣಾಯಿತು. ಇಷ್ಟಾದರೂ ಆ ಕಾಡಮ್ಮ ನೇರಾಗಿ ಏನೂ ಹೇಳುವುದಿಲ್ಲ. ಎಲ್ಲದಕ್ಕೂ ಗೂಢಾರ್ಥವೇನಾ! ಅರ್ಥಮಾಡಿಕೊಳ್ಳುವಾಗ ತಲೆ ಒಡೆದು ಹೋಗುತ್ತದೆ. ನನಗೆ ತೋರುವುದೇನಂದರೆ, ಕಾಡಿನಲ್ಲಿರುವ ಬೇರೆ ಜಾತಿಯವರ ಹಾಗೆಯೇ ಸಿಕ್ಕಿದಾಗ ಮಾಂಸ, ಸಿಕ್ಕದಿರುವಾಗ ಬಿದಿರಕ್ಕಿಯೋ, ಹಣ್ಣೋ ಕಾಯೋ ತಿನ್ನುವುದಕ್ಕೆ ಕಲಿಯುವುದೇ ಒಳ್ಳೆಯದು. ಏನನ್ನುವೆ ಹೆಬ್ಬುಲಿಹೆಗ್ಗಾ?" ಎಂದನು.

"ನಾನ್ನುವುದು—" ಎಂದವನೇ ಹೆಬ್ಬುಲಿಹೆಗ್ಗ ಪಕ್ಕದಲ್ಲಿದ್ದವನ ಕೈಯಿಂದ ಮೊರಟು ದೊಣ್ಣೆಯನ್ನು ಎಳೆದುಕೊಂಡು, ಒಂದೇಟು ಆ ಮುದಿ ಪೂಜಾರಿಯ ಬೆನ್ನಿಗೆ ಹಾಕಿ, "ಜಾತಿ ದ್ರೋಹದ ಮಾತು ಹೇಳುವೆಯಾ ಮುದಿಯಾ? ನಿನ್ನಂಥವನ ಬಾಯಿಯಿಂದ ಇಂಥ ಮಾತು ಬರುವುದೆಂದರೇನು? ನಮ್ಮ ಜಾತಿ ಮಾಂಸದ ಹೊರತು ಮತ್ತೇನೂ

ಮುಟ್ಟಕೂಡದೆಂಬ ಕಟ್ಟಳೆಗೆ ದ್ರೋಹ ಬಗೆಯುವೆಯಾ ?" ಎಂದು ಗರ್ಜಿಸಿದನು.

ಆ ಪೆಟ್ಟಿಗೆ ಪೂಜಾರಿ ಆರ್ಭಟಿಸಿ ಹಾರಿನಿಂತನು. ಕೆದರಿದ. ಬಿಳಿ ತಲೆಗೂದಲು ಹಾರಾಡುವಂತೆ ಮುಖವನ್ನು ಬರಬರ ಆಡಿಸುತ್ತ "ಓಹೋ ! ಕಾಡಮ್ಮಾ !" ಎಂದು ದೊಡ್ಡದನಿಯಿಂದ ಕೂಗಿದನು. "ಎಲವೆಲಾ ! ಹೆಬ್ಬುಲಿಹೆಗ್ಗಾ ! ಈಗ ಹೇಳು ! ಏನು ಸಂಗತಿ ? ಜಾತಿ ನಾಯಕನಾದ ನಿನ್ನ ಏಟಿನಿಂದ ಹಸಿವೆ ಹಾರಿಹೋಗಿ ಹುರುಪೇರಿತು !" ಎಂದು ಆಕಾಶಕ್ಕೆ ಹಾರಿ ಕೈಗೆಟುಕಿದ ಮರದಕೊಂಬೆಯನ್ನು ಹಿಡಿದು ಕೋತಿಯಂತೆ ಓಲಾಡುತ್ತ ಕೂಗತೊಡಗಿದನು. ಕಾಡಮ್ಮನ ಆವೇಶ ಬಂದಿತ್ತು ಅವನಲ್ಲಿ.

ಹೆಬ್ಬುಲಿಹೆಗ್ಗ ಹೇಳಿದಂತೆ ಇಬ್ಬರು ಮೂವರು ನರಭಕ್ಷಕ ಹುಡುಗರು ಪೂಜಾರಿಯ ಕಾಲುಗಳನ್ನು ಹಿಡಿದು ಎಳೆದು, ಅವನು ಕೆಳಗೆ ಬೀಳುವ ಸಮಯಕ್ಕೆ ಸೊಂಟ ಹಿಡಿದು ನೇರಾಗಿ ನಿಲ್ಲಿಸಿದರು. ಹೆಬ್ಬುಲಿಹೆಗ್ಗ ಕೈಕಟ್ಟಿ ಬೆನ್ನು ಬಗ್ಗಿಸಿ ಭಕ್ತಿ ವಿಧೇಯತೆಯಿಂದ ಇನ್ನೊಂದುಸಾರಿ ತಾನು ಗುಡಿಯಲ್ಲಿ ನೋಡಿದ ಅದ್ಭುತ ದೃಶ್ಯವನ್ನು ಅವನ ಮುಂದೆ ಮಂತ್ರದ ಹಾಗೆ ಹೇಳಿದನು.

ಈಸಾರಿ ಪೂಜಾರಿ ಅವನು ಹೇಳುವುದನ್ನು ಶ್ರದ್ಧೆಯಿಂದ ಕೇಳಿ, ಮಾತು ಮಾತಿಗೂ ತಲೆಯಾಡಿಸಿ, ಆಮೇಲೆ ಸ್ವಲ್ಪ ಹೊತ್ತು ಆಕಾಶದ ಕಡೆಗೆ ನೋಡಿ, ಬಾಯಿಯಿಂದ ಏನೇನೋ ಮಂತ್ರಗಳನ್ನು ಪಟಪಟಿಸಿ, ಥಕ್ಕನೆ ಬಗ್ಗಿ ಮಣ್ಣು ಬಾಚಿಕೊಂಡು, ಅಲ್ಲಿದ್ದವರ ತಲೆಯ ಮೇಲೆ ಬೀಳುವಂತೆ ಸುತ್ತಲೂ ಚೆಲ್ಲಿ, "ಓಹೋಯ್ ! ಎಲ್ಲಾ ಬನ್ನಿ. ಮರಗಳಿಲ್ಲದ ಖಾಲೀ ಜಾಗೆಯಲ್ಲಿ ಒಲೆತೋಡಿರಿ ! ಉರಿ ಹಾಕಿರಿ ! ಅದರ ಮೇಲೆ ಹಂಡೆ ತುಂಬಾ ನೀರು ಕಾಸಿರಿ ! ಕಾಡಮ್ಮಾ



ತಾಯಿಯ ಗುಡಿಯಲ್ಲಿರುವ ಹೆಬ್ಬಾವನ್ನೂ, ತೋಳವನ್ನೂ, ಕಾಡುಬೆಕ್ಕನ್ನೂ ಇಲ್ಲಿಗೆ ತನ್ನಿರಿ ! ಆ ಹಂಡೆಯೊಳಗೆ ಅವುಗಳನ್ನು ಹಾಕಿ ಕುದಿಸಿರಿ." ಎಂದನು.

"ಆ ಬೆಕ್ಕು ಇನ್ನೂ ಆ ಕಲ್ಲು ಗೋಡೆಯಲ್ಲಿ ಇರಲಿಕ್ಕಿಲ್ಲ. ಇಲ್ಲದಿದ್ದರೆ ಎಲ್ಲಿದ್ದರೂ ಹುಡುಕಿಸಿ ತರಿಸುತ್ತೇನೆ. ಹೆಬ್ಬಾವೂ ತೋಳವೂ ಒಂದನ್ನೊಂದು ಕೊಂದುಕೊಂಡಿರಬಹುದು. ಈಗಲೇ ತರಿಸುತ್ತೇನೆ" ಎಂದ ಹೆಬ್ಬುಲಿಹೆಗ್ಗ.

"ಆ ಬೆಕ್ಕು ಸಿಕ್ಕದೆ ಹೋದರೆ ಅದು ಮ್ಯಾಂವ್ ಎಂದ ಕಲ್ಲನ್ನೇ ಎತ್ತಿಕೊಂಡು ಬನ್ನಿ. ಅದು ಮುಖ್ಯ. ಅದನ್ನು ಸಳಸಳ ಕುದಿಯುವ ಹಂಡೇ ನೀರಿನೊಳಗೆ ಹಾಕಲೇಬೇಕು ! ಬೆಕ್ಕು ಸಿಕ್ಕಿದರೆ ಅದನ್ನೂ ಹಾಕಿರಿ!" ಎಂದ ಮುದುಕ ಪೂಜಾರಿ.

"ಅದರ ಗೂಢಾರ್ಥ ಹೇಳಿಸು ತಾಯೇ. ಹೆಬ್ಬಾವು ತೋಳಕ್ಕೆ ಗಂಟುಹಾಕಿಕೊಂಡು ನನ್ನ ಕಣ್ಣಿಗೆ ಏಕೆ



ತೋರಿಸಿದೆಯಮ್ಮಾ ? ನಮಗೆ ಬೇಗದಲ್ಲೇ ಬೇಟೆಯಾಡಲು ಒಳ್ಳೊಳ್ಳೆಯ ಪ್ರಾಣಿಗಳು ಸಿಕ್ಕುತ್ತವೋ ? ಏನು ಕಾಡಮ್ಮಾ ತಾಯಿಯ ಅರ್ಥ ? " ಎಂದು ಕೇಳಿದ ಹೆಬ್ಬುಲಿಹೆಗ್ಗ ಹೆದರುತ್ತ.

ಆ ಪ್ರಶ್ನೆಗೆ ಮುದಿ ಪೂಜಾರಿ ಹಾರಿ ಕುಣಿದು, ಮೂರು ಸುತ್ತು ತಿರುಗಿ, ಆಚೀಚೆ ಓಲಾಡುತ್ತಾ ನಿಂತು, "ಎಲೋ ಹೆಬ್ಬುಲಿಹೆಗ್ಗಾ, ನಾನಾರು ? ಕಾಡಮ್ಮಾ ತಾಯಿ ! ಎಲೋ ಮಗನೇ ! ನಾನು ದಯಮಾಡಿದರೆ ಕಾಡು ಮೃಗಗಳು ಮಾತ್ರವಲ್ಲಾ, ನರಮಾಂಸ ಕೂಡಾ ದೊರಕುತ್ತದೆ. ಹೆದರಬೇಡ. ಸುಭಿಕ್ಷಕಾಲ ಬಂತು. ಹೇಳಿದಹಾಗೆ ಮುಡಿಸು !" ಎಂದು ಕಿರಿಚಿದ.

ಆ ಕೂಡಲೇ ಹೆಬ್ಬುಲಿಹೆಗ್ಗನ ಆಜ್ಞೆಯಂತೆ ಮರಗಳ ನಡುವಿನ ಖಾಲೀ ಪ್ರದೇಶದಲ್ಲಿ ದೊಡ್ಡದೊಂದು ಒಲೆಯ ಹೊಂಡವನ್ನು ತೋಡಿದರು. ಅದರ ಮೇಲೆ ಭಾರಿಯಾದೊಂದು ಹಂಡೆಯನ್ನಿಟ್ಟು ನೀರು ತಂದು ಸುರಿದರು. ಎಲ್ಲರಿಗೂ ಹೊಸ ಆಸೆ ಮೂಡಿತು. ಮಿತಿಮೀರಿದ ಉತ್ಸಾಹದಿಂದ ಹುಡುಗರು ಓಡುತ್ತ ಕುಣಿಯುತ್ತ, ಒಣಗಿದ ಕಟ್ಟಿಗೆಗಳನ್ನು ತಂದು ತಂದು ಬೆಂಕಿಯಲ್ಲಿ ಹಾಕತೊಡಗಿದರು. ಬೆಂಕಿ ಜೋರಾಗಿ ಉರಿಯುತ್ತ ಬಿಳಿಯ ಹೊಗೆ ಆಕಾಶದಲ್ಲಿ ವ್ಯಾಪಿಸತೊಡಗಿತು.

ಇಲ್ಲಿ ಹೀಗೆ ನಡೆಯುತ್ತಿರುವಾಗಲೇ ಮಾಯಾ ಸರೋವರೇಶ್ವರನು ಏರಿದ ಹಂಸರಥದ ಮೇಲೆ ಆಕಾಶದಲ್ಲಿ ಕೆಲವು ರಣಹದ್ದುಗಳು ಬಂದುಬಿದ್ದುವು. ಹಂಸಗಳು ರಥವನ್ನು ತಲಾ ಒಂದೊಂದು ದಿಕ್ಕಿಗೆ ಎಳೆದುದರಿಂದ ರಥವು ತಲೆಕೆಳಗಾಗಿ ನೆಲೆ ತಪ್ಪಿತು. ರಥದ ಹಿಡಿಕೆಯೊಂದನ್ನು ಹಿಡಿದುಕೊಂಡು ಮಾಯಾ ಸರೋವರೇಶ್ವರನ ಅಂಗರಕ್ಷಕನೊಬ್ಬ ಮಾತ್ರ ಕೆಳಗೆ ಬೀಳದೆ ಉಳಿದುಕೊಂಡನು. ರಥವನ್ನು ಹೊಡೆಯುವವನೂ, ಮಾಯಾ ಸರೋವರೇಶ್ವರನೂ, ಕನಕಾಕ್ಷ ರಾಜನ ಕುಮಾರಿ ಕಾಂಚನಮಾಲೆಯೂ ಒಬ್ಬೊಬ್ಬರೂ ಅಷ್ಟೆತ್ತರದಿಂದ ಕೆಳಗೆ ಬೀಳತೊಡಗಿದರು.

ಒಬ್ಬರು ಬಿದ್ದುದಕ್ಕೂ ಇನ್ನೊಬ್ಬರು ಬಿದ್ದುದಕ್ಕೂ ಸಮಯ ವ್ಯತ್ಯಾಸವಿದ್ದುದರಿಂದ ಒಬ್ಬರಿಗೊಬ್ಬರು ದೂರದೂರವಾಗಿಯೇ ಪಲ್ಟೀ ಹೊಡೆದು ಬಿದ್ದರು. ದೇಹದಲ್ಲಿ ದೇವರು ಬಂದು ತಲೆಕೆದರಿ ಮೇಲೆ ನೋಡುತ್ತಿದ್ದ ನರಭಕ್ಷಕರ ಪೂಜಾರಿ ನರಾಕಾರವೊಂದು ಆಕಾಶದಲ್ಲಿ ಕಂಡ ಕೂಡಲೇ, "ಓಹೋ ! ಕಾಡಮ್ಮಾ ! ದಯ ಮಾಡಿದಳು ! ಹಸಿವಿನಿಂದ ನರಳುವ ಮಕ್ಕಳಿಗೆ ಕಾಡಮ್ಮ ದಯಮಾಡಿದಳು. ನಮಗೆ ಆಹಾರವಾಗಿ ಮನುಷ್ಯನನ್ನೇ ಕಳುಹಿಸಿದ್ದಾಳೆ ! ನೀರು ಬೇಗ ಬಿಸಿಯಾಗಲಿ. ನರಮಾಂಸ, ಹೆಬ್ಬಾವು, ತೋಳ, ಬೆಕ್ಕುಗಳ ಮಾಂಸಗಳೊಂದಿಗೆ ಬೇಯಿಸಿ ಮೊದಲು ಕಾಡಮ್ಮಾ ತಾಯಿಗೆ ನೈವೇದ್ಯ ಮಾಡಬೇಕು. ಆಮೇಲೆ ನಮಗೆ ಬೇಕಾಗುವಷ್ಟು ಬೇಟೆ ದೊರುಕುತ್ತಾ ಇರುತ್ತೆ. ನಮ್ಮ ಕಷ್ಟ

ವಲ್ಲಾ ತೀರಿತು. ಜೈ ಕಾಡಮ್ಮಾ!" ಎಂದನು. ನರಭಕ್ಷಕ ಜಾತಿಯವರೆಲ್ಲರೂ ಉತ್ಸಾಹದಿಂದ ತಲೆಯೆತ್ತಿ ನೋಡುತ್ತಾ ಚಪ್ಪಾಳೆ ತಟ್ಟಿಕೊಂಡಿರಲು, ಮಾಯಾಸರೋವರೇಶ್ವರನು ನೆಲಕ್ಕೆ ಬಿದ್ದು ತಲೆ ಯೊಡೆದು ಸಾಯದೆ, ಅದೃಷ್ಟವಶಾತ್ ನೇರಾಗಿ ಆ ಹಂಡೆಯೊಳಗೇ ಬಿದ್ದುಬಿಟ್ಟನು.

ಅವನು ಹಂಡೆಯ ನೀರಿನಲ್ಲಿ ಒಂದು ಮುಳುಗು ಹಾಕಿ, ಎದ್ದು ಸಣ್ಣ ದನಿಯಿಂದ ಕೂಗಿ ಹಂಡೆಯ ಅಂಚು ಹಿಡಿದುಕೊಂಡು ಸುತ್ತಲೂ ನೋಡಿ, ತುಂಬಾ ಹೆದರಿದನು.

ಆ ನರಭಕ್ಷಕರ ಗುಂಪಿನ ನಡುವಿನಿಂದ, ಪೂಜಾರಿ ನಗುತ್ತ ಅವನ ಬಳಿಗೆ ಬಂದು, "ಓಹೋ ! ನಮ್ಮ ಕಾಡಮ್ಮ ಸೊರಕಲು ಮನುಷ್ಯನನ್ನು ನಮಗೆ ಕೊಡಲಿಲ್ಲ. ಒಳ್ಳೇ ಕೊಬ್ಬಿದ ಕೋಣದಂಥವನನ್ನೇ ಬಹುಮಾನ ಕಳಿಸಿದ್ದಾಳೆ. ಯಮಲೋಕದ ಶಿಕ್ಷೆಗೆ ಪಾತ್ರನಾದವನನ್ನೇ ಕಳುಹಿಸಿರಬೇಕು. ನಮಗೇನೂ ಶ್ರಮವಾಗದಂತೆ ತಾನಾಗಿ ಒಲೆಯ ಮೇಲಿನ ಹಂಡೆಯೊಳಗೆ ಬೀಳುವಂತೆ ಮಾಡಿದ್ದಾಳೆ ! ಅಡ್ಡ ಬಿದ್ದೇ ! ಇನ್ನೂ ಅನೇಕ ನರರನ್ನು ಕಳುಹಿಸುವ ಏರ್ಪಾಡು ಮಾಡಮ್ಮಾ ! ಕಾಡಮ್ಮಾ !" ಎಂದು ನೆಲದಲ್ಲಿ ದಂಡಪ್ರಣಾಮಮಾಡಿ ಎದ್ದನು.

ಪೂಜಾರಿಯ ಮಾತುಗಳನ್ನು ಕೇಳಿ ಮಾಯಾ-ಸರೋವರೇಶ್ವರನು ಇನ್ನಷ್ಟು ಹೆದರಿದನು. ತಾನು ಕ್ರೂರ ನರಭಕ್ಷಕರ ಕೈಗೆ ಸಿಕ್ಕಿಬಿದ್ದೆನೆಂದು ತಿಳಿದು ಏನು ಉಪಾಯವೆಂದು ತೀವ್ರವಾಗಿ ಯೋಚಿಸಿದನು. ಎಂತಹ ತನಗೆ ಇಂತಹ ದುರ್ಗತಿಯೇ ! ಹಂಡೆಯ ನೀರು ಕ್ರಮವಾಗಿ ಬಿಸಿಯೇರಿಕೊಂಡು ಬರುತ್ತಿದೆ. ಶರೀರವು ಚುರ್ರೆನ್ನತೊಡಗಿತು. ಕಳೆಯುವ ಪ್ರತಿ ಕ್ಷಣವೂ ಯಾತನೆಯದು!

ಮಾಯಾಸರೋವರೇಶ್ವರನು ಹಂಡೆಯೊಳಗಿನಿಂದ ಹೊರಗೆ ಹಾರಲು ಪ್ರಯತ್ನಮಾಡಿದನು. ಆಗ



ಮುದುಕ ಪೂಜಾರಿ ಉರಿಯುವ ಕೊಳ್ಳಿಯನ್ನೆತ್ತಿ ಕೊಂಡು ಅವನಿಗೆ ಗುರಿ ತೋರಿಸುತ್ತ, "ಎಲೋ ! ನಮ್ಮ ಹೊಟ್ಟೆಗೆ ಸೇರಲಿರುವ ಮನುಷ್ಯಾ ! ಹಂಡೆಯ ನೀರಿನ ಬಿಸಿತಾಳದೆ ಹೊರಗೆ ಹಾರಲು ಯತ್ನಿಸಿದರೆ, ಎತ್ತಿ ಒಲೆಯೊಳಗೇ ಹಾಕಿ ಸುಟ್ಟು ತಿಂದೇವು ! ಜಾಗ್ರತೆ ! ಒಳಗೇ ಕುಕ್ಕರಿಸಿಕೋ." ಎಂದು ಗದರಿಸಿದನು.

ಇನ್ನು ತನಗೆ ಮರಣವೇ ಗತಿಯೆಂದು ಮಾಯಾ-ಸರೋವರೇಶ್ವರನಿಗೆ ಗೊತ್ತಾಯಿತು. ಸಾಯುವುದಕ್ಕೆ ಅವನು ಹೆದರುವುದಿಲ್ಲವಾದರೂ ಬಿಸಿನೀರಿನಲ್ಲಿ ಸುಟ್ಟುಸುಟ್ಟು ಸಾಯುವುದು ಕಷ್ಟಕರವಲ್ಲವೇ ? ಏನಾದರೂ ಮಾಡಿ ಹಂಡೆಯೊಳಗಿನಿಂದ ಹೊರಗೆ ಪಾರಾಗಲೇಬೇಕು. ಇದು ಶತ್ರುವಿಗೂ ಬರಬಾರದ ಸಾವು.

ಪುಣ್ಯವಶಾತ್ ಒಂದು ಉಪಾಯ ಹೊಳೆಯಿತು. ಅವನು ಪೂಜಾರಿಯೊಂದಿಗೆ ಏನೋ ಗುಟ್ಟು

ಹೇಳುವವನ ಹಾಗೆ ಸಣ್ಣ ಸ್ವರದಲ್ಲಿ, "ಸ್ವಲ್ಪ ಕೇಳಿರಿ ಮಹಾ ಪೂಜಾರ್ರೇ! ನಿಮ್ಮ ದೇವಮ್ಮ ಆಕಾಶದಲ್ಲಿ ಇನ್ನೂ ಮೂವರನ್ನು ನಿಮ್ಮ ಆಹಾರಕ್ಕಾಗಿ ಕಳಿಸಿದಳು!" ಎನ್ನಲು, ಪೂಜಾರಿ ಆಶ್ಚರ್ಯದಿಂದ, "ಅವರೆಲ್ಲಿ?" ಎಂದ.

"ಅವರು ದಾರಿತಪ್ಪಿ ಅರಣ್ಯದಲ್ಲಿ ಮತ್ತೆಲ್ಲೋ ಇಳಿದ ಹಾಗಿದೆ. ನೀವು ನನ್ನನ್ನೂ ಕರೆದುಕೊಂಡು ಹೋಗಿ ನೋಡಿದರೆ ಅವರು ಸಿಗುವರು. ಇಲ್ಲೆಲ್ಲೋ ಸಮೀಪದಲ್ಲಿದ್ದಾರೆ. ತಡಮಾಡಿದರೆ ತಪ್ಪಿಸಿಕೊಳ್ಳುವರು" ಎಂದು ಹುಸಿಗುಂಡನ್ನು ಹಾಕಿದ ಮಾಯಾಸರೋವರೇಶ್ವರ.

ಆ ಮಾತು ನಿಜವೆಂದೇ ತೋರಿತು ಪೂಜಾರಿಗೆ. ಅವನು ಕೂಡಲೇ ಸರೋವರೇಶ್ವರನನ್ನು ಹಂಡೆಯೊಳಗಿನಿಂದ ಹೊರಕ್ಕೆ ಎಳೆಯಿಸಿ, ಕಾಡಮ್ಮನ ಗುಡಿಗೆ ಹೋಗಿದ್ದ ಹೆಬ್ಬುಲಿಹೆಗ್ಗನಿಗೆ ಇಲ್ಲಿ ನಡೆದ ಸಂಗತಿ ಹೇಳುವಂತೆ ಒಬ್ಬನನ್ನು ಕಳುಹಿಸಿದನು. ಆಮೇಲೆ ನಾಲ್ಕು ಮಂದಿಯನ್ನು ತನ್ನೊಂದಿಗೆ ಕರೆದುಕೊಂಡು, ಮಾಯಾಸರೋವೇಶ್ವರನನ್ನು ಕರೆದುಕೊಂಡು ಅರಣ್ಯದೊಳಗೆ ಹೊರಟನು.

ಅವರು ಅರಣ್ಯದಲ್ಲಿ ಸಾಯಂಕಾಲದ ವರೆಗೂ ತಿರುಗಿದರು. ಎಷ್ಟೋ ಪ್ರದೇಶಗಳಲ್ಲಿ ಹುಡುಕಿದರು. ಆಗ ಮಾಯಾಸರೋವೇಶ್ವರನಿಗೆ ಹಂಸರಥ ಸಾರಥಿಯ ಚಾಟಿಕೋಲು ಒಂದು ಕಡೆ ಬಿದ್ದಿರುವುದು ಕಾಣಿಸಿತು. ಆತುರದಿಂದ ಅದರ ಕಡೆಗೆ ಓಡಿದನು. ಅದನ್ನು ಎತ್ತಿಕೊಂಡು ತನ್ನ ಸಾರಥಿ ಈ ಮರದ ಕೊಂಬೆಯಲ್ಲಿರುವನೇನೋ ಎಂದುಕೊಂಡು ತಲೆ ಯೆತ್ತಿ ಪರಿಶೀಲಿಸುವ ದೃಷ್ಟಿಯನ್ನು ಬೀರಿದನು. ಮರದಕೊಂಬೆಯಲ್ಲಿ ಯಾರೂ ಕಾಣಲಿಲ್ಲ. ಅಷ್ಟರಲ್ಲಿ ಅಕಸ್ಮಾತ್ತಾಗಿ ಅಲ್ಲಿಗೆ ಆಗಲೇ ಹಾರಿಬಂದ ತನ್ನ ಹಂಸರಥವನ್ನು ಆಕಾಶದಲ್ಲಿ ನೋಡಿದನು. ಆಶೆಯು ಕುಡಿ ತಲೆ ಎತ್ತಿತು.

ಅದೇ ಸಮಯದಲ್ಲಿ ಮತ್ತೇನೋ ಶಬ್ದ ಕೇಳಿಬರತೊಡಗಿತು. ಈ ಪ್ರಾಂತದಿಂದ ಎದ್ದು ಆಕಾಶದಲ್ಲಿ ತುಂಬಿದ ಹೊಗೆಯ ಮಂಡಲವನ್ನು ಗುರುತಿಸಿಕೊಂಡು ಬರುತ್ತಿರುವ ಸಿದ್ಧ ಸಾಧಕ, ಮಕರ ಕೇತುಗಳು ನರಭಕ್ಷಕರಿರುವ ಈ ಪ್ರಾಂತಕ್ಕೆ ಬಂದುಬಿಟ್ಟರು.

ಸಿದ್ಧಸಾಧಕನು ತನ್ನ ಬೃಹತ್ ವಾಹನವಾದ ನರವಾನರವನ್ನು ತಟ್ಟಿ ತಟ್ಟಿ ಕೆರಳಿಸುತ್ತ "ಜೈ! ಮಹಾಕಾಳಾ!" ಎಂದು ಕರ್ಕಶವಾಗಿ ಕೂಗಿದ ಕೇಕೇ ಶಬ್ದವನ್ನು ಕೇಳಿ, ಮಾಯಾಸರೋವರೇಶ್ವರನೂ, ಅವನೊಂದಿಗಿರುವ ನರಭಕ್ಷಕ ಜಾತಿಯವರೂ ತುಂಬಾ ಹೆದರಿ ನಡುಗಲು ತೊಡಗಿದರು.

(ಇನ್ನೂ ಇದೆ)






# ವೀರಹನುಮಾನ್

**ರಾ**ಮನು ಅಯೋಧ್ಯೆಯಲ್ಲಿ ಅತಿ ವೈಭವದಿಂದ ಪಟ್ಟಾಭಿಷಿಕ್ತನಾದ ಅನಂತರ ರಾಜ್ಯಪಾಲನೆಯ ವಿಷಯದಲ್ಲಿ ಮುಖ್ಯ ಶ್ರದ್ಧೆಯನ್ನು ಇಡ ತೊಡಗಿದನು. ಪ್ರತಿಯೊಂದು ವಿವರಗಳನ್ನೂ ಆಯಾ ಅಧಿಕಾರಿಗಳೊಂದಿಗೆ ಕೇಳಿ ಕೇಳಿ ತಿಳಿಯ ತೊಡಗಿ, ಮಂತ್ರಿಗಳೊಡನೆ ಆಲೋಚನೆ ಮಾಡು ತ್ತಿದ್ದನು. ಮುಖ್ಯವಾಗಿ ಧನಾಗಾರವು ತುಂಬಾ ಬಡವಾಗಿರುವ ವಿಷಯ ಬಯಲಾಯಿತು.

ಅದನ್ನು ತಿಳಿದು ರಾಮನು ಮುಖ್ಯ ಮಂತ್ರಿಯಾದ ಸುಮಂತನನ್ನು ಕರೆಯಿಸಿ "ರಾಜ್ಯದಲ್ಲಿ ಪ್ರಜೆಗಳಿಗೆ ಉಪಯೋಗವಾದ ಅನೇಕ ಕಾರ್ಯಗಳನ್ನು ಮಾಡಿಸಬೇಕಾಗಿದೆ. ಅವೆಲ್ಲವೂ ಸರಿಯಾಗಿ ನೆರವೇರಲು ತುಂಬಾ ಧನವು ಬೇಕಾಗಿದೆ. ರಾಜ ಭಂಡಾರದಲ್ಲಿ ನೋಡಿದರೆ ಧನವು ಅಲ್ಪಸ್ವಲ್ಪವೇ ಇದೆ. ಹೀಗೇಕಾಯಿತೋ ? ಅದನ್ನು ತುಂಬಿಸುವ ಕಾರ್ಯವನ್ನು ಮೊದಲು ಮಾಡಬೇಕು" ಎಂದನು. "ಕಳೆದ ಹದಿನಾಲ್ಕು ವರ್ಷಗಳಿಂದ ಪ್ರಜೆಗಳು ತಾವು ಕಟ್ಟಬೇಕಾದ ಕಪ್ಪಗಳನ್ನು ಕಟ್ಟಲಿಲ್ಲ. ಅದಕ್ಕೇ ಖಜಾನೆ ಹೀಗಿದೆ" ಎಂದನು ಸುಮಂತ.

"ಹಾಗೇಕಾಯಿತು ? ಕಾಲಕಾಲಕ್ಕೆ ಮಳೆಬೀಳದೆ ಬರಗಾಲ ಬಂದು, ಪ್ರಜೆಗಳು ಬಹಳ ಕಷ್ಟಗಳಿಗೆ ಬಿದ್ದಿರಬೇಕೆಂದು ಕಾಣುತ್ತದೆ" ಎಂದು ರಾಮನು ಅನುತಾಪದಿಂದ ಹೇಳಿದನು.

ಸುಮಂತನು ಸ್ವಲ್ಪ ಹೊತ್ತು ಏನೋ ಸಂದೇಹ ದಿಂದ ಸುಮ್ಮನಿದ್ದು, "ಅಂತಹದೇನೂ ಬರಲಿಲ್ಲ ಪ್ರಭೂ. ದೇಶವು ಸಸ್ಯಶ್ಯಾಮಲವಾಗಿ ಚೆನ್ನಾಗಿಯೇ ಇದ್ದಿತು. ಪ್ರಜೆಗಳೇ ಬದಲಾಯಿಸಿ ಬಿಟ್ಟರು. ಧನಿಕರಾದ ವರ್ತಕರು ತೆರಿಗೆ ಕಟ್ಟದೆ ಸುಮ್ಮನಿದ್ದರು. ರೈತರೂ ಕಪ್ಪ ಕಾಣಿಕೆ ಸಲ್ಲಿಸಲಿಲ್ಲ. ಐಶ್ವರ್ಯವಂತರು ಇನ್ನಿಷ್ಟು ಐಶ್ವರ್ಯವಂತರಾದರು. ಬಡ ಜನರು ಮತ್ತಿಷ್ಟು ಬಡವರಾದರು. ಇದು ಪರಿಸ್ಥಿತಿ" ಎಂದನು. "ಹಾಗೇಕಾಯಿತು ? ಭರತನು ಏನು ಮಾಡುತ್ತಿದ್ದ ?" ಎಂದು ರಾಮನು ತುಸು ಕೋಪದಿಂದ ಕೇಳಿದನು.



" ಪ್ರಭುವೇ, ಭರತನು ರಾಜ್ಯಪಾಲನೆಯ ಕಡೆಗೆ ದೃಷ್ಟಿ ಹಾಕಿದ್ದಾದರೂ ಉಂಟೆ ? ನಿನ್ನನ್ನೇ ನೆನೆದು, ನಿನ್ನ ಪಾದುಕೆಗಳನ್ನೇ ಪೂಜಿಸುತ್ತ ಹದಿನಾಲ್ಕು ವರ್ಷಗಳನ್ನೂ ಕಳೆದುಬಿಟ್ಟನು. ಅವನ ಪರಾಙ್ಮುಖತೆಯನ್ನು ಆಧಾರಮಾಡಿಕೊಂಡು, ಅವನ ಮುಂದೆ ನಿನ್ನ ನಾಮವನ್ನು ಕೀರ್ತನೆಮಾಡಿ, ಅನೇಕರು ಧನವನ್ನು ಬಹುಮಾನ ಪಡೆದುಕೊಂಡು ಹೋದರು. ನಾವು ಯಾರಾದರೂ ದೇಶ ಪರಿಪಾಲನೆಯ ವಿಷಯ ನೆನಪುಮಾಡಿದರೆ, 'ತೆರಿಗೆ ಕಟ್ಟದಿರುವ ಪ್ರಜೆಗಳಿಗೆ ಏನೂ ಮಾಡಬೇಡಿ. ಎಲ್ಲರೂ ನಮ್ಮಣ್ಣ ಶ್ರೀರಾಮನ ಪ್ರೀತಿಯ ಪೌರರೇ ಅಲ್ಲವೇ ?' ಎಂದು ಮಾತ್ರ ಹೇಳಿ ಸುಮ್ಮನಿದ್ದು ಬಿಡುವನು. ನಾನು ಕೂಡಾ ಪ್ರಭುವಿನ ಆಜ್ಞೆಗೆ ಒಳಪಡಬೇಕಾದವನು ತಾನೇ ? " ಎಂದನು ಸುಮಂತ.

ನಡೆದ ಸಂಗತಿ ಏನೆಂಬುದು ರಾಮನಿಗೆ ಅರ್ಥವಾಗಿಹೋಯಿತು. " ಹೀಗಿರುವಾಗ ನಾನು ಮಾತ್ರ ಹೇಗೆ ರಾಜ್ಯಪಾಲನೆ ಮಾಡಲಿ ? ಪ್ರಜೆಗಳಿಗೆ ಅಗತ್ಯವಾದ ಸುಖ ಸೌಕರ್ಯಗಳನ್ನು ಹೇಗೆ ಕಲ್ಪಿಸಲಿ ? ಪ್ರಜೆಗಳ ಮನಸ್ಸು ನೋವಾಗದಂತೆ ಹೇಗೆ ಧನಸಂಗ್ರಹ ಮಾಡಲಿ ? " ಎಂದುಕೊಂಡು ನಿಟ್ಟುಸಿರುಬಿಟ್ಟನು. ಅದೇ ಸಮಯಕ್ಕೆ ಹೇಳಿಟ್ಟಂತೆ ಅಲ್ಲಿಗೆ ಲಕ್ಷ್ಮಣನು ಬಂದನು.

ಅಣ್ಣ ರಾಮನ ಚಿಂತೆಯನ್ನು ನೋಡಿ ಲಕ್ಷ್ಮಣನು ಸುಮಂತನ ಮುಖ ನೋಡಿ ಏನಾಯಿತೆಂಬ ಅರ್ಥವನ್ನು ವ್ಯಕ್ತಪಡಿಸಿದನು. ಸುಮಂತನು ಲಕ್ಷ್ಮಣನಿಗೆ ಧನಾಗಾರದ ಸಂಗತಿಯನ್ನು ಹೇಳಿದನು.

ಆಗ ಲಕ್ಷ್ಮಣನು ಸ್ವಲ್ಪ ಹೊತ್ತು ಆಲೋಚನೆ ಮಾಡಿ. " ಹಾಗಾದರೆ. ನನ್ನ ಮಾತನ್ನು ಮನ್ನಿಸಿ ಒಂದು ಕೆಲಸಮಾಡಿ. ಪ್ರಭುತ್ವಕ್ಕೆ ತೆರಿಗೆ ಸಲ್ಲಿಸಬೇಕಾದವರೆಲ್ಲಾ ತಲಾ ಒಂದೊಂದು ಕುಂಬಳಕಾಯಿಯಷ್ಟು ಬಂಗಾರವನ್ನು ತಂದುಕೊಟ್ಟರೆ ಸಾಕು. ಅವರಿಗೆ ಯಾವ ಶಿಕ್ಷೆಯೂ ಇಲ್ಲ. ಈ ಪದ್ಧತಿಯಿಂದ ಪ್ರಜೆಗಳಿಗೆ ಯಾವ ಹಾನಿಯೂ ಆಗದೆಂದು ನಾನು ಉತ್ತರವಾದಿಯಾಗಿರುತ್ತೇನೆ " ಎಂದನು. ಈ ವ್ಯವಸ್ಥೆಗೆ ರಾಮನು ಅಂಗೀಕರಿಸಿದನು. ಆ ದಿನವೇ ಕೋಸಲ ದೇಶದೊಳಗೆಲ್ಲಾ ಡಂಗುರ ಸಾರಲಾಯಿತು.

ಹದಿನಾಲ್ಕು ವರ್ಷಗಳಿಂದ ತೆರಿಗೆ ಕಟ್ಟದಿದ್ದ ಪ್ರಜೆಗಳಿಗೆ ಒಂದಲ್ಲ ಎಂಟು ಹತ್ತು ಕುಂಬಳಕಾಯಿಗಳಷ್ಟು ಬಂಗಾರವನ್ನು ಕೊಡುವಂತೆ ಹೇಳಲಿಲ್ಲವಲ್ಲಾ. ಎಂದು ಅವರೆಲ್ಲ ತುಂಬ ಸಂತೋಷವನ್ನೇ ಪಡುತ್ತಾರೆ. ಕೇಳಿದರೆ ಆನೆಯ ತಲೆಯಷ್ಟು ದೊಡ್ಡ ಬಂಗಾರವನ್ನಾದರೂ ಕೊಡಲು ಸಿದ್ಧರಾಗಿರುತ್ತಾರೆಂದೂ ಲಕ್ಷ್ಮಣನಿಗೆ ಗೊತ್ತಿತ್ತು. ಆದರೆ ಪ್ರಜೆಗಳ ಮನಸ್ಸು ನೋವಾದರೆ ಮಾತ್ರ ರಾಮನು ಸಹಿಸುವವನಲ್ಲ. ಎಲ್ಲಾ ಪ್ರಜೆಗಳೂ ಒಂದೇ ಬಗೆಯ ಮನಸ್ಸಿನವರಲ್ಲವಷ್ಟೆ ? ಅದಕ್ಕೆ

ಲಕ್ಷ್ಮಣನು ಹನುಮಂತನನ್ನು ಕರೆದು, "ನೀನು ಪ್ರಜೆಗಳ ನಡುವೆ ರಹಸ್ಯವಾಗಿ ತಿರುಗಿ, ಈ ಡಂಗುರದ ವಿಷಯದಲ್ಲಿ ಪ್ರಜೆಗಳು ಅಸಂತೃಪ್ತಿ ವ್ಯಕ್ತಪಡಿಸುತ್ತಾರೋ ತಿಳಿದು ಬಾ" ಎಂದು ಹೇಳಿ ಕಳುಹಿಸಿದನು.

ಹನುಮಂತನು ಸೂಕ್ಷ್ಮರೂಪದಿಂದ ಜನರ ನಡುವೆ ಸುತ್ತಾಡಿ, ಅವರು ಹೇಳಿಕೊಳ್ಳುವ ಮಾತುಗಳನ್ನು ಕಿವಿಗೊಟ್ಟು ಕೇಳಿ, ತಿರುಗಿ ಬಂದು ಲಕ್ಷ್ಮಣನೊಂದಿಗೆ, "ಕುಂಬಳಕಾಯಷ್ಟು ಬಂಗಾರ ಕೊಡಲು ಯಾರಿಗೂ ಕಷ್ಟವೆಂದು ಕಾಣುವುದಿಲ್ಲ. 'ಇಷ್ಟೇನಾ, ರಾಮನು ಪರಮ ಸಾಧು ಅಂತ ಕಾಣುತ್ತೆ' ಎಂದೂ ಹೇಳುತ್ತಾರೆ. 'ಇಷ್ಟು ವರ್ಷದ ಬಾಕಿಗೆ ಎಷ್ಟೋ ಕೇಳಬೇಕಿತ್ತು, ಕೊಡುತ್ತಿದ್ದೆವು' ಎನ್ನುತ್ತಾರೆ. ಕೆಲವರಿಗೆ ಒಂದೇ ಕುಂಬಳಕಾಯಿಯಷ್ಟು ಬಂಗಾರವೆಂದು ಕೇಳಿ ಪರಮ ಸಂತೋಷವಾಗಿದೆ" ಎಂದರು.

ಇದನ್ನು ಕೇಳಿದ ಮೇಲೆ ಲಕ್ಷ್ಮಣನಿಗೆ ಒಂದು ಸಂದೇಹ ಬಂದಿತು. ಪ್ರಜೆಗಳಲ್ಲಿ ಕೆಲವರಾದರೂ ನೀತಿವಂತರು ಇಲ್ಲದೆ ಹೋಗರು. ಅಂತಹವರಿಗೆ ಅನ್ಯಾಯ ನಡೆಯಬಾರದು. ಒಂದು ಕುಂಬಳಕಾಯಿಗಿಂತಲೂ ಕಡಿಮೆ ಶಕ್ತಿಯವರಾರಾದರೂ ಇದ್ದರೆ ಅವರು ನೊಂದುಕೊಳ್ಳದಂತೆ ಕಾರ್ಯ ಕೈಗೂಡಬೇಕು.

ಈ ಸಮಸ್ಯೆಗೆ ಏನು ಪರಿಹಾರವೆಂದು ಲಕ್ಷ್ಮಣನು ಸ್ವಲ್ಪ ಹೊತ್ತು ಆಲೋಚನೆ ಮಾಡಿದನು. ಏನೋ ಒಂದು ಉಪಾಯ ತೋರಿತು. ಕೂಡಲೇ ಅವನು ಹನುಮಂತನನ್ನು ಕರೆದುಕೊಂಡು ಧರ್ಮದೇವತೆಯ ಆಲಯಕ್ಕೆ ಹೋದನು. ಆಲಯದಲ್ಲಿ ಸ್ವಲ್ಪ ಹೊತ್ತಿದ್ದ ಮೇಲೆ, ಲಕ್ಷ್ಮಣನೂ, ಅತಿ ಸೂಕ್ಷ್ಮ ರೂಪದಿಂದ ಹನುಮಂತನೂ ಸಣ್ಣ ಸ್ವರದಿಂದ ಮಾತಾಡಿಕೊಳ್ಳುತ್ತಾ ಹೊರಗೆ ಬಂದರು. ಆ



ಸಮಯಕ್ಕೆ ಸೂರ್ಯನು ಮುಳುಗಿ ಚೆನ್ನಾಗಿ ಕತ್ತಲೆಯೂ ಆಯಿತು.

ಮರುದಿನ ಬೆಳಗಾಗುವಾಗ ರಾಜಭವನದ ಪ್ರಾಂಗಣದಲ್ಲಿ ದೊಡ್ಡದೊಂದು ತಕ್ಕಡಿಯನ್ನು ನೇತಾಡಿಸಿ ಕಟ್ಟಿಸಿದ್ದರು. ಅದರ ಒಂದು ತಟ್ಟೆಯಲ್ಲಿ ಒಂದು ಕುಂಬಳಕಾಯನ್ನು ಇಟ್ಟಿದ್ದರು. ಪ್ರಜೆಗಳು ಬಂಗಾರವನ್ನು ಮೂಟೆಯಾಗಿ ಕಟ್ಟಿಕೊಂಡು ಆ ಪ್ರದೇಶಕ್ಕೆ ಬಂದರು. ಅವರಲ್ಲಿ ಒಬ್ಬನು ಮುಂದಾಗಿ ತಾನು ತಂದ ಬಂಗಾರವನ್ನು ಎರಡನೇ ತಟ್ಟೆಗೆ ಹಾಕಿದನು. ಕುಂಬಳಕಾಯಿ ಇರುವ ತಟ್ಟೆ ಮೇಲೇಳಲೇ ಇಲ್ಲ. ಆಗ ಅವನು ಆಶ್ಚರ್ಯಪಡುತ್ತ, ತಲೆ ತುರಿಸಿಕೊಂಡು ಮನೆಗೆ ಓಡಿಹೋಗಿ, ಇನ್ನೊಂದು ದೊಡ್ಡ ಬಂಗಾರದ ಮೂಟೆಯೊಂದಿಗೆ ತಿರುಗಿಬಂದು, ಅದನ್ನೆಲ್ಲಾ ಎರಡನೇ ತಟ್ಟೆಯಲ್ಲಿ ಹಾಕಿದ ಮೇಲೆ ತೂಕ ಸರಿಹೋಯಿತು. ಇದನ್ನು ನೋಡಿದ ಪ್ರಜೆಗಳು ಬೇಗಬೇಗನೆ ತಮ್ಮ ತಮ್ಮ



39-3



ಮನೆಗೆ ಹೋಗಿ ಮತ್ತಿಷ್ಟು ಬಂಗಾರವನ್ನು ಗಂಟು ಕಟ್ಟಿಕೊಂಡು ತಂದು ಸಿದ್ಧರಾದರು.

ಪ್ರಜೆಗಳಲ್ಲಿ ಒಬ್ಬನು ಭಯಪಡುತ್ತಾ, ತನ್ನ ಹತ್ತಿರವಿರುವ ಸ್ವಲ್ಪ ಮಾತ್ರ ಬಂಗಾರವನ್ನು ತಕ್ಕಡಿಯ ತಟ್ಟೆಗೆ ಹಾಕಿದನು. ಅಷ್ಟೊಂದು ಸ್ವಲ್ಪ ಮಾತ್ರ ಬಂಗಾರದಿಂದ ತಕ್ಕಡಿ ಎದ್ದು ಮುಳ್ಳು ನೆಟ್ಟಗೆ ಮಧ್ಯದಲ್ಲಿ ನಿಂತು ಸರಿತೂಕ ತೋರಿಸಿತು. ಇದನ್ನು ನೋಡಿ ಪ್ರಜೆಗಳಿಗೆ ಬಹಳ ವಿಚಿತ್ರ ವೆನಿಸಿತು. ರಾಮನ ತಕ್ಕಡಿಗೆ ವಿಶೇಷ ಮಹಿಮೆ ಯಿರಬೇಕೆಂದು ಕೆಲವರಿಗೆ ತೋರಿತು.

ಹೀಗೆ ಮತ್ತೆ ಕೆಲವರು ತಕ್ಕಡಿಯಲ್ಲಿ ಬಂಗಾರ ವನ್ನು ಸುರಿದ ತರುವಾಯ ಕೆಲವರಿಗೆ ಹೆಚ್ಚು ಬಂಗಾರವನ್ನೂ, ಕೆಲವರಿಗೆ ಸ್ವಲ್ಪವೇ ಬಂಗಾರ ವನ್ನೂ ತೂಗುವುದನ್ನು ನೋಡಿ, ಅದು ನ್ಯಾಯದ ತಕ್ಕಡಿಯೆಂದು ಎಲ್ಲರೂ ನಂಬಿ, ನಮಸ್ಕಾರಮಾಡಿ ಬಂಗಾರವನ್ನು ಸುರಿಯತೊಡಗಿದರು. ನ್ಯಾಯವಾಗಿ ಯಾರು ಎಷ್ಟು ಕೊಡಬೇಕೆಂಬುದನ್ನು ನಿರ್ಣಯಿಸಿ ಕೊಂಡು ಆ ತಕ್ಕಡಿ ಭಾರ ತೂಗುತ್ತದೆಂದು ಎಲ್ಲರೂ ಮೆಚ್ಚಿದರೇ ಹೊರತು, ಮನಸ್ಸಿನಲ್ಲಿ ಕೂಡಾ ಬೇರೆ ವಿಧವಾಗಿ ಭಾವಿಸಲಿಲ್ಲ. ಪ್ರಜೆಗಳು ಸಂತೋಷದಿಂದ ತಾವು ಕಟ್ಟಬೇಕಾದುದನ್ನೆಲ್ಲಾ ಕಟ್ಟಿದರು. ಕೋಶಾಗಾರವು ತುಂಬಿಹೋಯಿತು.

ಈ ವಿಧವಾಗಿ ತಕ್ಕಡಿ ತೂಗಿದುದನ್ನು ತಿಳಿದು ರಾಮನು ಆಶ್ಚರ್ಯಪಟ್ಟನು. ಅವನು ಲಕ್ಷ್ಮಣ ನನ್ನೂ, ಮಂತ್ರಿ ಸುಮಂತನನ್ನೂ ತನ್ನ ರಹಸ್ಯ ಮಂದಿರಕ್ಕೆ ಕರೆಯಿಸಿದನು. ಅವರ ಹಿಂದೆಯೇ ಹನುಮಂತನೂ, ಸೂಕ್ಷ್ಮರೂಪದಿಂದ ಮಂದಿರ ದೊಳಗೆ ಪ್ರವೇಶಿಸಿದನು.

ರಾಮನು ಲಕ್ಷ್ಮಣನನ್ನು ನೋಡಿ, "ಇದೇನು ಆಶ್ಚರ್ಯವಾಗಿದೆ ಲಕ್ಷ್ಮಣಾ! ಕುಂಬಳಕಾಯಿಯ ಭಾರ ಎಷ್ಟಿದ್ದೀತು? ಅದು ಮಣಗಟ್ಟಲೆ ಬಂಗಾರಕ್ಕೆ ಸರಿಸಮವಾಗಿ ತೂಗಿತಲ್ಲಾ? ಅಷ್ಟೇ ಅಲ್ಲದೆ ಬಗೆಬಗೆಯ ಭಾರವನ್ನು ತೋರಿಸಿದೆ. ನೀವೆಲ್ಲರೂ ಕೂಡಿ, ನನ್ನನ್ನು ತೃಪ್ತಿಪಡಿಸಲು ಪ್ರಜೆಗಳಿಗೆ ಮೋಸಮಾಡಿದ್ದೀರಿ! ನಿಜತಾನೇ?" ಎಂದು ಗದರಿಸಿ ಕೇಳಿದನು.

ಲಕ್ಷ್ಮಣನು ಕೈ ಕಟ್ಟಿಕೊಂಡು, "ಇದರಲ್ಲಿ ಯಾವ ಮೋಸವೂ ಇಲ್ಲ. ಎಲ್ಲವೂ ಧರ್ಮ ದೇವತೆಯ ಆದೇಶಾನುಸಾರವಾಗಿಯೇ ನಡೆದಿದೆ. ಇದರಲ್ಲಿ ನಮ್ಮ ಹನುಮಂತನೂ ಸ್ವಲ್ಪ ಶ್ರಮ ಪಟ್ಟಿದ್ದಾನೆ. ತಕ್ಕಡಿಯ ನಡುವಿನ ದಂಡವನ್ನು ಹಿಡಿದುಕೊಂಡು ಹನುಮಂತನು ಸೂಕ್ಷ್ಮರೂಪ ದಿಂದ ನಿಂತಿದ್ದ. ಧರ್ಮದೇವತೆ ಅತನಿಗೆ ಮಾತ್ರ ಕಾಣುವಂತೆ ನಿಂತು, ಯಾರಿಗೆ ಎಷ್ಟು ಬಂಗಾರಕ್ಕೆ ಸರಿತೂಕ ತೋರಿಸಬೇಕೆಂಬುದನ್ನು ಕೈಸನ್ನೆಯಿಂದ ಹೇಳುತ್ತಿದ್ದಳು. ಅವಳ ಸೂಚನೆಗೆ ತಕ್ಕ ಹಾಗೆ ಹನುಮಂತನು ತಕ್ಕಡಿಯನ್ನು ಪಾದದಿಂದ ಒತ್ತಿ

ಹಿಡಿದುಕೊಳ್ಳುತ್ತಿದ್ದ. ಧರ್ಮದೇವತೆಯ ನಿರ್ದೇಶನ ಹನುಮಂತನಿಗೆ ಮಾತ್ರವೇ ಗೊತ್ತಾಗುವಂತಿದ್ದಿತು. ನಾನೂ ಹನುಮಂತನೂ ಧರ್ಮದೇವತೆಯ ಆಲಯಕ್ಕೆ ಹೋಗಿ ಆಕೆಯ ಸಹಾಯವನ್ನು ಬೇಡಿಕೊಂಡು ಪಡೆದುಕೊಂಡೆವು. ಪ್ರಜೆಗಳಲ್ಲಿ ಧರ್ಮ ತಪ್ಪದೆ ತೆರಿಗೆ ಕಟ್ಟಿದವರು ಕೆಲವೇ ಮಂದಿ ಗಳಿರುತ್ತಾರೆ. ತೆರಿಗೆ ತಪ್ಪಿಸಿದವರು ಹೆಚ್ಚು ಮಂದಿ ಇದ್ದಾರೆ. ಈಗ ನ್ಯಾಯಸಮ್ಮತವಾಗಿ ಬರಬೇಕಾಗಿದ್ದ ತೆರಿಗೆಯೆಲ್ಲವೂ ಬಂದುಬಿಟ್ಟಿತು. ಇದೆಲ್ಲಾ ನ್ಯಾಯ ವಾಗಿ ಯಾರ ಮನಸ್ಸೂ ನೋವಾಗದೆ ಧರ್ಮ ಸಮ್ಮತವಾಗಿ ನಡೆದಿದೆ. ಇದಕ್ಕಾಗಿ ನಾನೂ ಹನುಮಂತನೂ ಬಹಳ ಶ್ರಮಪಟ್ಟೆವು" ಎಂದನು.

"ಹೌದು ಹೌದು ! ಲಕ್ಷ್ಮಣನ ಮಾತು ನಿಜ !" ಎಂದು ಧರ್ಮದೇವತೆಯ ಅಶರೀರವಾಣಿಯೂ ಕೇಳಿಸಿತು. ಆ ಕೂಡಲೇ ಹನುಮಂತನು ಸೂಕ್ಷ್ಮ ರೂಪದಿಂದ ನಿಜರೂಪ ಧರಿಸಿ ರಾಮನಿಗೆ ವೀರಾಸನಮಾಡಿ ನಮಸ್ಕಾರ ಮಾಡಿದನು. ರಾಮನು ಹನುಮಂತನನ್ನು ಬಾಯ್ತುಂಬಾ ಪ್ರಶಂಸೆ ಮಾಡಿದನು.

ಆಮೇಲೆ ಪ್ರಜೆಗಳ ಸುಖ ಸೌಕರ್ಯಗಳ ಏರ್ಪಾಡು ರಾಜ್ಯದಲ್ಲೆಲ್ಲಾ ಬಹುಬೇಗನೇ ನಡೆಯಿತು. ಆ ಸಂಬಂಧವಾಗಿ ಒಂದುದಿನ ರಾಮನು ಪುರಜನ ರೆಲ್ಲರಿಗೂ ಒಂದು ಔತಣ ಕೂಟವನ್ನು ಏರ್ಪಡಿ ಸಿದನು. ಅದಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನು ತರುವುದರಲ್ಲಿ, ಚಪ್ಪರ ಹಾಕುವುದರಲ್ಲಿ, ಮಂಟಪ ಕಟ್ಟುವುದರಲ್ಲಿ ಹನುಮಂತನೇ ಮುಂದಿದ್ದು, ಒಂದು ಕ್ಷಣ ಕೂಡಾ ವಿಶ್ರಾಂತಿಯಿಲ್ಲದೆ, ಕೆಲಸಮಾಡ ತೊಡಗಿದನು.

ಸೀತೆ ಹನುಮಂತನು ಪಡುವ ಶ್ರಮವನ್ನು ಗಮನಿಸಿದಳು. ಅವಳಿಗೆ ಹನುಮಂತನ ಮೇಲೆ ತುಂಬ ಪುತ್ರವಾತ್ಸಲ್ಯವಿದ್ದಿತು. ಲಂಕೆಯಲ್ಲಿ ತಾನಿರು



ವುದನ್ನು ಮೊದಲು ತಿಳಿದು ರಾಮನಿಗೆ ತಿಳಿಸಿದವನು ಅವನು. ಅಂತಲೇ ಅವಳು ಅವನ ಮೇಲೆ ಕನಿಕರ ಗೊಂಡು ಬಳಿಗೆ ಕರೆದು. "ಅಪ್ಪಾ, ಹನುಮಾ ! ಬೆಳಿಗ್ಗಿನಿಂದ ಸ್ವಲ್ಪವೂ ವಿಶ್ರಾಂತಿಯಿಲ್ಲದೆ ಕೆಲಸ ಮಾಡುತ್ತಿರುವೆ. ಊಟದ ವೇಳೆಯಾಗುತ್ತಾ ಇದೆ. ಅತಿಥಿಗಳಿಗೆ ಯಾವುದರ ಕೊರತೆಯೂ ಆಗದಂತೆ ನೋಡಬೇಕಾದವನು ನೀನು. ಆದುದರಿಂದ ಮೊದಲು ನೀನು ಉಂಡುಬಿಡುವುದು ಚೆನ್ನಾಗಿರುತ್ತೆ. ನಾನೇ ಬಡಿಸುತ್ತೇನೆ" ಎಂದಳು.

ಹನುಮಂತನು ಸರಿಯೆಂದು ಸೀತೆಯ ಹಿಂದೆಯೇ ಅಡಿಗೇ ಶಾಲೆಗೆ ಹೋದನು. ಸೀತೆ ಅವನಿಗೆ ದೊಡ್ಡ ಎಲೆ ಹಾಕಿ ಬಡಿಸಲು ಪ್ರಾರಂಭಿಸಿದಳು. ಬಡಿಸಿದ ಪದಾರ್ಥಗಳನ್ನು ಮರುಕ್ಷಣ ಹನುಮಂತನು ತಿಂದುಬಿಡಲು ತೊಡಗಿದನು. ಹೀಗೆ ಸ್ವಲ್ಪ ಹೊತ್ತು ನಡೆಯಲು, ಸಾವಿರ ಜನರಿಗಾಗಿ ಮಾಡಿದ ಅನ್ನ, ಸಾರು, ಮೊದಲಾದ ಪದಾರ್ಥಗಳ ಗಂಗಾಳ



ಮಾಡಿಕೊಂಡು ತೃಪ್ತನಾಗದೆ ಹೋದರೆ ನಮ್ಮ ಮರ್ಯಾದೆ ಉಳಿಯದು ಸ್ವಾಮಿ !" ಎಂದುಕೊಂಡು ಶಿವಪಂಚಾಕ್ಷರೀ ಮಂತ್ರವನ್ನು ಮೂರುಸಾರಿ ಜಪಿಸಿದಳು.

ಮರುಕ್ಷಣದಲ್ಲಿ ಹನುಮಂತನು ಸಂತೃಪ್ತಿಯಿಂದ ತೇಗಿದನು. ಸೀತೆ ಅವನ ಮುಂದೆ ಬಂದು. "ಏನಪ್ಪಾ, ಇನ್ನೂ ಸ್ವಲ್ಪ ಬಡಿಸಲೆ ?" ಎಂದು ಕೇಳಿದಳು.

"ಬೇಡಮ್ಮಾ ಬೇಡ, ಹೊಟ್ಟೆ ತುಂಬಿ ಹೋಯಿತು. ನಿನ್ನ ಕೈಯಿಂದ ಸ್ವಲ್ಪ ಉಂಡರೂ ಹೊಟ್ಟೆ ತುಂಬುತ್ತದಮ್ಮ" ಎಂದು ಹೇಳಿ ಹನುಮಂತನು ಎದ್ದು ಹೊರಗೆ ಹೋದನು.

ಆಮೇಲೆ ಸೀತೆ ಅನ್ನಪೂರ್ಣಾದೇವಿಯನ್ನು ಧ್ಯಾನಿಸಿದಳು. ಆ ಕೂಡಲೇ ಅಡಿಗೆಶಾಲೆಯಲ್ಲಿ ಮಾಡಿದ ಪದಾರ್ಥಗಳೆಲ್ಲ ಗಂಗಾಳಗಳಲ್ಲಿ ತುಂಬಿಕೊಂಡುವು. ಆಮೇಲೆ ಪುರಜನರಿಗೂ ವಾನರರಿಗೂ ಔತಣದ ಊಟ ಪ್ರಾರಂಭವಾಯಿತು. ವಾನರರ ಪಂಕ್ತಿಯಲ್ಲಿ ಕೊನೆಯಲ್ಲಿ ಕುಳಿತಿದ್ದ ಹುಡುಗ ವಾನರನೊಬ್ಬ ತನ್ನ ಎಲೆಯಲ್ಲಿದ್ದ ಮೆದುವಾದ ಕಲ್ಲಂಟೇ ಕಾಯಿಯನ್ನು ಕೈಯಲ್ಲಿ ತಿರುಗಿಸಿ ಚೆಂದ ನೋಡುತ್ತ ಬೆರಳಿನಿಂದ ಒತ್ತಿದ ಕೂಡಲೇ ಕಲ್ಲಂಟೇ ಬೀಜ ತುರ್ರನೆ ಮೇಲಕ್ಕೆಹಾರಿತು.

ಹುಡುಗವಾನರ "ಅರೇ ! ನಿನಗೆ ಮಾತ್ರ ಹಾರಲು ಗೊತ್ತೆಂದುಕೊಂಡಿಯಾ ? ನೋಡು ನನ್ನ ಪ್ರತಾಪ !" ಎನ್ನುತ್ತ ಎದ್ದು ಮೇಲೆ ಹಾರಿದನು. ಅವನು ಹಾರಿದ್ದು ನೋಡಿ ಮತ್ತೊಬ್ಬ ವಾನರನು ಅವನಿಗಿಂತ ಹೆಚ್ಚು ಎತ್ತರಕ್ಕೆ ಹಾರಿದ. ಅದನ್ನು ನೋಡಿ ಇನ್ನೊಬ್ಬ ವಾನರ ಇನ್ನಷ್ಟು ಎತ್ತರಕ್ಕೆ ಹಾರಿದನು. ಈ ವಿಧವಾಗಿ ವಾನರ ಸಮೂಹವೆಲ್ಲಾ ಒಬ್ಬರನ್ನು ಮಿಂಚಿ ಮತ್ತೊಬ್ಬರು ಅಂತರಿಕ್ಷದಲ್ಲಿ ಹಾರತೊಡಗಿದರು. ಅಂಗದನೂ, ನೀಲನೂ, ಸುಗ್ರೀವನೂ ಕೂಡಾ ಹಾರಿದರು. ಹನುಮಂತನು ಮಾತ್ರ ಹೀಗೆ

ಗಳೆಲ್ಲವೂ ಖಾಲಿಯಾಗಿ ಹೋದುವು. ಇದನ್ನು ನೋಡಿ ಸೀತೆ ಆಶ್ಚರ್ಯಪಡುತ್ತ ಓಡುತ್ತಾ ರಾಮನ ಬಳಿಗೆ ಹೋಗಿ, ಹನುಮಂತನ ಊಟದ ಸಮಾಚಾರವನ್ನು ಹೇಳಿದಳು.

ರಾಮನು ನಗುತ್ತ, "ಹನುಮಂತನು ಯಾರೆಂದುಕೊಂಡೆ ? ಸಾಕ್ಷಾತ್ ಪರಮಶಿವನೇ ಈ ರೂಪದಲ್ಲಿ ಅವತರಿಸಿ ನಮ್ಮ ಸೇವಕನಾಗಿದ್ದಾನೆ. ಅವನನ್ನು ಹೇಗೆ ತೃಪ್ತಿಪಡಿಸುವೆಯೋ ನಾನರಿಯೆ, ಎಲ್ಲಾ ನಿನ್ನ ಪ್ರಜ್ಞೆಗೇ ಸೇರಿದ್ದು. ನಾನೇನೂ ಮಾಡುವಂತಿಲ್ಲ" ಎಂದನು.

ಸೀತೆ ಅಡಿಗೇ ಶಾಲೆಗೆ ತಿರುಗಿಬಂದು ಹನುಮಂತನ ಹಿಂದಿನಿಂದ ನಿಂತುಕೊಂಡಳು. ಹನುಮಂತನು ಇನ್ನೂ ಎಲೆಯಲ್ಲಿರುವುದನ್ನು ತಿನ್ನುತ್ತಲೇ ಇದ್ದನು. ಸೀತೆ ತನ್ನ ಮನಸ್ಸಿನಲ್ಲಿ "ಪರಮೇಶ್ವರಾ ! ನೀನು ಯಾರೆಂಬುದನ್ನು ನಾನು ತಿಳಿದುಕೊಂಡೆನು. ಇಷ್ಟರಲ್ಲಿ ನಿನ್ನ ಹಸಿವೆಗೆ ಸ್ವಸ್ತಿ

ಹಾರಬೇಕೆಂಬುದು ರಾಮನ ಆಜ್ಞೆಯೇನೋ ಎಂದುಕೊಂಡು ಲಾಂಛನಪ್ರಾಯವಾಗಿ ಕಪ್ಪೆಯಂತೆ ಒಂದು ಕುಪ್ಪಳಿಕೆ ಹಾಕಿ ನಿಂತನು.

ಹೀಗೆ ಹಾರಾಡುವ ವಾನರರ ಕೋಲಾಹಲವನ್ನು ನೋಡಿ ರಾಮನು ಅಲ್ಲಿಗೆ ಬಂದು ಹನುಮಂತನೊಂದಿಗೆ, "ಎಲ್ಲರೂ ಅಷ್ಟಷ್ಟೆತ್ತರ ಆಕಾಶದಲ್ಲಿ ಹಾರಿದರೆ ನೀನುಮಾತ್ರ ಸಣ್ಣ ಕುಪ್ಪಳಿಕೆ ಹಾಕಿ ಸುಮ್ಮನಿರುವೆಯೇಕೆ ? " ಎಂದು ಕೇಳಿದನು.

"ಇಷ್ಟು ದೊಡ್ಡ ವೀರರ ಮುಂದೆ ನಾನು ಎಷ್ಟರವನು ? " ಎಂದ ಹನುಮಂತ ವಿನಯದಿಂದ.

ಆಗ ಜಾಂಬವಂತನು ಮುಂದೆ ಬಂದು, "ರಾಮಾ, ಈ ಹನುಮಂತನಿಗೆ ಒಬ್ಬರು ಹೇಳಿದರೆ ಹೊರತು ಇವನಿಗಿರುವ ಶಕ್ತಿಸಾಮರ್ಥ್ಯಗಳು ತಿಳಿಯುವುದಿಲ್ಲ." ಎಂದನು.

ರಾಮನು ಒಂದು ಬಿಳಿಯ ತಾಮರೆಯನ್ನು ಹನುಮಂತನಿಗೆ ಕೊಡುತ್ತಾ, "ಹನುಮಾನ್, ನಮ್ಮ ವಂಶಕರ್ತನಾದ ಸೂರ್ಯಭಗವಾನನಿಗೆ ಈ ಬಿಳಿಯ ತಾಮರೆಯನ್ನು ಅರ್ಪಿಸಬೇಕಾಗಿದೆ. ಇದನ್ನು ಸೂರ್ಯನಿಗೆ ಕೊಡಲು ಶಕ್ತನಾದವನು ನೀನೊಬ್ಬನೇ !" ಎಂದನು.

"ರಾಮಾಜ್ಞೆ !" ಎಂದು ಹನುಮಂತನು ಆ ಬಿಳಿದಾವರೆಯನ್ನು ತೆಗೆದುಕೊಂಡು ಒಮ್ಮೆಗೇ ಆಕಾಶದ ಮೇಲೆ ಹಾರಿಹೋಗಿ ಸೂರ್ಯನ ರಥವನ್ನು ಹಿಡಿದು, "ಗುರುದೇವಾ ! ರಾಮನು ಇದನ್ನು ನಿನಗೆ ಸಮರ್ಪಿಸಲು ನನ್ನ ಹತ್ತಿರ ಕೊಟ್ಟು ಕಳುಹಿಸಿದ್ದಾನೆ. ಸ್ವೀಕರಿಸು " ಎಂದು ಹೇಳಿ ಹೂವನ್ನು ಕೊಟ್ಟನು.

ಸೂರ್ಯನು ಹನುಮಂತನನ್ನು "ಚಿರಂಜೀವಿಯಾಗಿರು !" ಎಂದು ಆಶೀರ್ವದಿಸಿ ತನ್ನ ಕೈಯಲ್ಲಿದ್ದ ಒಂದು ಶ್ವೇತಪದ್ಮವನ್ನು ಹನುಮಂತನಿಗೆ ಕೊಟ್ಟು, "ಇದನ್ನು ರಾಮನಿಗೆ ಕೊಡು. ಇದರ ಪ್ರಭಾವದಿಂದ ರಾಮನ ಪರಿಪಾಲನೆಯಲ್ಲಿ ದೇಶವು ಸುಭಿಕ್ಷವಾಗಿರುತ್ತದೆ " ಎಂದನು.

ಆ ಶ್ವೇತಪದ್ಮವು ಬಾಡುವುದಿಲ್ಲ. ಅದು ಇರುವಲ್ಲಿ ಸಕಾಲದಲ್ಲಿ ಮಳೆ ಬೀಳುತ್ತದೆ. ಋತು ಧರ್ಮಗಳು ಕ್ರಮ ತಪ್ಪುವುದಿಲ್ಲ. ಅಂತಹ ಸೂರ್ಯ ಪದ್ಮವನ್ನು ತೆಗೆದುಕೊಂಡು ಹನುಮಂತನು ಸೂರ್ಯನಿಂದ ಅಪ್ಪಣೆ ಪಡೆದು, ಹಿಂದಿರುಗಿ ಬಂದು ರಾಮನಿಗೆ ಅದನ್ನು ಕೊಟ್ಟನು.

ರಾಮನು ಆತ್ಮಾನಂದದಿಂದ ಹನುಮಂತನನ್ನು ಆಲಿಂಗಿಸಿಕೊಂಡನು. ಹನುಮಂತನು ಸೀತಾರಾಮರಿಗೆ ಪ್ರಣಾಮಮಾಡಲು, "ಅಪ್ಪಾ, ಹನುಮಾ ! ನೀನು ಚಿರಂಜೀವಿಯಾಗಿರು !" ಎಂದು ಸೀತೆ ಅತ್ಯಂತ ವಾತ್ಸಲ್ಯದಿಂದ ಹರಸಿದಳು.



39-8